# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಮೆಚ್ಚಿನ ಪತ್ರಿಕೆ

ಸಂಪುಟ : ೧೩  ಸಂಚಿಕೆ : ೪  ಎಪ್ರಿಲ್ ೨೦೦  ಬೆಲೆ : ೧೦ ರೂ/-

## ಎಲ್ಲರಿಂತಲೂ ಸನಾತನವಾದಿಗಳು ಹೆಚ್ಚು ಡೇಂಜರ್



## ನಾಗಮಾರಪಳ್ಳಿಗೆ ಧರ್ಮ್ರ- ಟಾಂಗ್ ?

## ಬಸವಳಿದಿರುವ ಮಲ್ಲಿಕಾರ್ಜುನ ಖರ್ಗೇ!



## ಗಣಿ ಧಣಿಗಳ ಧೂಳು



## ನೀನಲ್ಲದೆ ನನಗೆ ಮತ್ತಾರು ಇಲ್ಲ



ಪತ್ರಿಕೆಯ ಪುಟ

# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೪ ಎಪ್ರಿಲ್ - ೨೦೦೯ ಬೆಲೆ : ೧೦ ರೂ/.

ಸಂಪಾದಕರು

ವಿಶ್ವಾರಾಧ್ಯ ಸತ್ಯಂಪೇಟೆ



ಪ್ರಕಾಶನ

ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ ಬಸವ ಮಾರ್ಗ ಸಿ.ಬಿ.ಕಾಲನಿ

ಶಹಾಪುರ - ೫೮೫ ೨೨೩ ಕಲಬುರ್ಗಿ ಜಿಲ್ಲೆ

ಸಂಚಾರ : 9480161315 e-mail : satyampet.2007@rediffmail.com

## ದರ್ಶನಾಪುರ ಶಾಸಕನೋ ? ಪುರಸಭೆಯ ಅಧ್ಯಕ್ಷನೋ ?!

ಅಗ್ನಿ ಅಂಕುರ



ಶಹಾಪುರ ಪುರಸಭೆಯಲ್ಲಿ ಕೋಟ್ಯಂತರ ಲೂಟಿ

ಮಹಾನಗರ ಪಾಲಿಕೆ ಜಂಗಿಕುಸ್ತಿಗೆ ಕಾರಣವೇನು?







ನಗು ದೇಹಸಿರಿಯನ್ನು ಹೆಚ್ಚಿಸುತ್ತದೆ

ಆತ್ಮೀಯ ವಿಶ್ವಾರಾಧ್ಯ ಸತ್ಯಂಪೇಟೆ
ಅವರಿಗೆ ನಮಸ್ಕಾರಗಳು,

ಕಡೆಗೂ ಬರದೇ ಬಿಟ್ಟಿರಲ್ರೀ..... ನಿನ್ನಿ ದಿನ ನಾನು ಗುಲ್ಬರ್ಗಾದಾಗ ಅಯ್ಯ ಭೀಮಯ್ಯ ಕಟ್ಟೀಮನಿ ಮುನ್ಸಿಪಾಟಿ ಬಗ್ಗೆನೇ ಮಾತಾಡ್ತಾ ಕುಂತಿದ್ವಿ.

ಆತ ನಾನೊಬ್ನೆ ಏನ್ ಮಾಡ್ಲಿ ? ನನಗೆ ಯಾರು ಸಾಥ್ ನೀಡೋರೇ ಇಲ್ಲ.... ಎಂದು ಪೇಚಾಡುತ್ತಿದ್ದ ! ದರ್ಶನಾಪುರ ಶರಣಬಸ್ಸಪ್ಪ ಪುರಸಭೆಯಲ್ಲಿ ನಡೆಸುತ್ತಿರುವ ಹಸ್ತಕ್ಷೇಪ ಕುರಿತಂತೂ ಆತನೇನು ಶಾಸಕನೋ ? ಪುರಸಭೆಯ ಅಧ್ಯಕ್ಷನೋ ? ಅರ್ಥನೇ ಆಗವಲ್ದು ಅಂದ.

ಒಟ್ಟಿನಲ್ಲಿ ಹೇಳ್ಬೇಕಂದ್ರ ನೀವು ಶಹಾಪುರ ಪುರಸಭೆಯ ಹಗರಣಗಳ ಬಗ್ಗೆ ಕ್ಷಕಿರಣ ಬೀರಿದ್ದೀರಿ. ನಿಮಗೆ ಧನ್ಯವಾದಗಳು.

**೦ ಅಡಿವೆಪ್ಪ ಜಾಕಾ , ಶಹಾಪುರ**

## ನಾಗಮಾರಪಳ್ಳಿಯನ್ನು ಬೆತ್ತಲೆ ಮಾಡಿದ್ದೀರಿ !

ಪ್ರೀತಿಯ ವಿಶ್ವಾರಾಧ್ಯ

ಬಹುಶಃ ಬೀದರ ಜಿಲ್ಲೆಯ ಯಾವ ಪತ್ರಕರ್ತನೂ ಗುರುಪಾದಪ್ಪ ನಾಗಮಾರಪಳ್ಳಿ ಎಂಬ ಫ್ಯೂಡಲ್ ಗುಣಗಳ ರಾಜಕಾರಣಿಯ ಬಗ್ಗೆ ಸ್ಪಷ್ಟವಾಗಿ ಬರೆದಿರಲಿಲ್ಲ. ಆದರೆ ತಾವು ಮಾತ್ರ ಆತನ ಯಾವ ಪೊಳ್ಳು ಇಮೇಜುಗಳಿಗೆ ತಲೆಕೆಡಿಸಿಕೊಳ್ಳದೆ ಇದ್ದದ್ದು ಇದ್ದಂತೆ ಬರೆದು ಬೆತ್ತಲೆಗೊಳಿಸಿದ್ದೀರಿ. ಈ ಮೂಲಕ ತಾವು ನಿಜವಾದ ಸಮಾಜಮುಖಿಯಾದ ಪತ್ರಕರ್ತ ಎಂದು ತೋರಿಸಿಕೊಂಡಿದ್ದೀರಿ. ಈ ಬಗ್ಗೆ ನಿಮಗೆ ಧನ್ಯವಾದಗಳು.

ಆದರೆ ಇದನ್ನು ಓದಿದ ಓದುಗ ತನ್ನ ಕರಾಮತ್ತನ್ನು ತಾನು ಮತ ನೀಡುವಾಗ ತೋರಿಸಿದರೆ ಸಾರ್ಥಕವಾಗುತ್ತದೆ. ನಾಗಮಾರಪಳ್ಳಿಯಂಥ ಗೋಮುಖವ್ಯಾಘ್ರಗಳ ಬಣ್ಣ ಬಟಾಬಯಲಾಗುತ್ತದೆ. ಇದರ ಜೊತೆಗೆ ಒಳ್ಳೆಯ ಗುಣ– ನೀತಿ , ನಡತೆಯುಳ್ಳವರು ರಾಜಕೀಯವನ್ನು ಪ್ರವೇಶಿಸಲು ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ನಿಮ್ಮ ವರದಿ ಗಾಢವಾದ ಚಿಂತನೆಗೆ ನಮ್ಮನ್ನು ಈಡುಮಾಡುತ್ತದೆ.

**೦ ಎಂ.ಎಸ್.ಬಿರಾದಾರ , ಬೀದರ**

# ಅಗ್ನಿಯ ಅಂತರಂಗ



















# ಕೊಲೆಗಡುಕರಿಗಿಂತಲೂ ಸನಾತನವಾದಿಗಳು ಹೆಚ್ಚು ಅಪಾಯಕಾರಿ



ಸಂಪಾದಕೀಯ

ಇಡೀ ದೇಶಾದ್ಯಂತ ಚುನಾವಣೆಯ ಕಾವು ತೀವ್ರಗತಿಯಲ್ಲಿ ಏರುತ್ತಿದೆ. ಬಹುತೇಕ ಎಲ್ಲ ಕಡೆಗೂ ಲಾರಿಗಟ್ಟಲೆ ಹೆಂಡದ ದಾಸ್ತಾನು, ಕೋಟ್ಯಂತರ ರೂಪಾಯಿಗಳ ಕಟ್ಟು ಚುನಾವಣಾ ಆಯೋಗಕ್ಕೆ ಸಿಗುತ್ತಿದೆ. ಇದು ಕೇವಲ ಇಂದಿನ ರಾಜಕಾರಣಿಗಳು ಚುನಾವಣೆಯ ಸಂದರ್ಭದಲ್ಲಿ ಖರ್ಚು ಮಾಡುವ ಹಣದ ಹೆಂಡದ ಶೀರ್ಪಣಿ ಮಾತ್ರ ! ಈ ಸತ್ಯ ಎಲ್ಲರಿಗೂ ಗೊತ್ತಿರುವಂಥದ್ದೆ.

ವರ್ಷಗಳಿಂದ ವರ್ಷಕ್ಕೆ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು ಹಾಗೂ ಪಕ್ಷಗಳೂ ಕೂಡ ನೈತಿಕ ಮೌಲ್ಯಗಳನ್ನು ಕಟ್ಟಿಟ್ಟು ಚುನಾವಣೆಯಲ್ಲಿ ಸ್ಪರ್ಧಿಸುತ್ತಿದ್ದಾರೆ. ಈ ಚುನಾವಣೆಯಲ್ಲಂತೂ ಕಾಲು ತೆಗೆಯುವವರು, ಕೈ ಕತ್ತರಿಸುವವರು, ಕುತ್ತಿಗೆಯನ್ನೇ ತೆಗೆಸುವವರು ಚುನಾವಣೆಗೆ ಸ್ಪರ್ಧಿಸಿದ್ದಾರೆ. ಇಂಥವರು ಗೆದ್ದು ಬಂದು ಭಾರತದ ಸಂಸತ್‌ನ್ನು ಪ್ರವೇಶಿಸಿದರೆ ಇನ್ನೇನಾಗಬೇಕು ? ಅದೆಲ್ಲ ಆಗೇ ತಿರುತ್ತದೆ.

ಯಾವುದೇ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವದ ಪದ್ಧತಿ ಯಶಸ್ವಿಯಾಗಬೇಕಾದರೆ ಅದರಲ್ಲಿ ಪ್ರಜ್ಞಾವಂತ ಪ್ರಜೆಗಳದ್ದೂ ಮಹತ್ವದ ಪಾತ್ರ ಇದೆ. ಆದರೆ ಬಡತನವೆ ಹಾಸಿ ಹೊದ್ದಂತಿರುವ ಭಾರತದಲ್ಲಿ ಪ್ರಜ್ಞಾವಂತರು ಒತ್ತಟ್ಟಿಗಿರಲಿ ಅಕ್ಷರಸ್ಥರ ಸಂಖ್ಯೆ ಗಣನೀಯವಾಗಿಲ್ಲ. ಅಕ್ಷರ ಕಲಿತವರು ಕೂಡ ಆದರ ಜೊತೆ ಜೊತೆಗೆ ಕಲಿಯುಬೇಕಾದ ಕನಿಷ್ಟ ಮಾನವೀಯತೆಯನ್ನು - ಕರುಣೆ- ಪ್ರೀತಿಯನ್ನು ಮರೆತುಬಿಟ್ಟರು. ಹಾಗಾಗಿ ಅಕ್ಷರಗಳ ಮೂಲಕವೆ ಹಾದವರನ್ನು ಹೇಗೆ ಮಾಡಬೇಕು ? ಮತ್ತು ಯಾರಿಗೂ ಗೊತ್ತಾಗದಂತೆ ಮಾಡಬೇಕು ಎಂಬ ತಂತ್ರಗಳನ್ನು ಬಹು ಸಲೀಸಾಗಿ ಕಲಿತರು. ಇದರಿಂದ ಭಾರತ ಮತ್ತಷ್ಟು ಭ್ರಷ್ಟಾಚಾರದಿಂದ ಕೊಳೆತುಹೋಗುತ್ತಿದೆ.

ಇದಲ್ಲದೆಯೂ ಇಲ್ಲಿ ನಾನಾ ನಮೂನೆಯ ರೋಗಗಳಿವೆ. ಈ ಜಿಡ್ಡಿನಿಂದ ಮತದಾರ ಪ್ರಭು ಇನ್ನೂ ಹೊರಗೆ ಬಂದಿಲ್ಲ. ಧಾರ್ಮಿಕತೆಯ ಹೆಸರಿನ ಮೇಲೆ ಈ ದೇಶದ ಜನಗಳ ಮೇಲೆ ಹಾಕಿದ ಕಲ್ಲು ಚಪ್ಪಡಿಯಂತೂ ಇನ್ನೂ ಹಾಗೆಯೆ ಇದೆ.

ಪೊಳ್ಳು ಸಿದ್ಧಾಂತಗಳು, ಬುರುಡೆ ದೇವರು , ಧರ್ಮದ ಮೇಲೆ ಹೊಸೆದಿರುವ ಕಗ್ಗಗಳ ಕುರಿತೆ ಜನರಿಗೆ ಹೇಳುತ್ತ ಜನತೆಯನ್ನು ಇನ್ನೂ ಮೌಢ್ಯದ ಮಾರಿಯತ್ತಲೆ ದೂಡುತ್ತಿವೆ. ೨೧ ಶತಮಾನದ ಹೊಸ್ತಿಲಲ್ಲಿ ಭಾರತ ನಿಂತಿದ್ದರೂ, ಭಾರತ ಪ್ರಕಾಶಮಾನವಾಗಿ ಹೊಳೆಯುತ್ತಿದೆ ಎಂದು ಹೇಳುತ್ತಿದ್ದರೂ , ಭಾರತ

# ನಿಮ್ಮೊಂದಿಗೆ

ನಿಜಕ್ಕೂ ಬಗ್ಗಡವಾಗಿದೆ. ಅದು ಹೊಳೆಯುವ ಬದಲು ತನ್ನ ಮೂಲ ಚಾರ್ಮ್ ಕಳೆದುಕೊಳ್ಳುತ್ತಿದೆ.

ಕೆಂಭೂತಗಳೆಲ್ಲ ನವಿಲುಗಳಂತೆ ಸಮಾಜದ ಮುಖ್ಯ ವಾಹಿನಿಗೆ ಬಂದು ತಮ್ಮ ಕುಣಿತವನ್ನು ಆರಂಭಿಸಿವೆ. ತಮ್ಮ ಕುಣಿತವೆ ಭಾರತದ ನಿಜವಾದ ಸಂಸ್ಕೃತಿ– ಸಾಹಿತ್ಯ ಎಂದು ಬಿಂಬಿಸುತ್ತಿವೆ. ತಾವು ಸೃಷ್ಟಿಸಿದ ದೇವರು – ಧರ್ಮ – ಸಿದ್ಧಾಂತಗಳಲ್ಲಿಯೇ ಧಾರ್ಮಿಕತೆ ಅಡಗಿದೆ ಎಂದು ನಂಬಿಸಹೊರಟಿವೆ. ನಿಜಕ್ಕೂ ಇದು ಎಲ್ಲರೂ ಯೋಚಿಸಬೇಕಾದ ಸಂದಿಗ್ಧ ಸಂದರ್ಭ.

ಈ ಸಂದರ್ಭದಲ್ಲಿ ಮತದಾರ ಪ್ರಭು ಕೂಡ ತನ್ನ ಮತವನ್ನು ಘಟಿಂಗನಿಗೆ, ಗಂಡುಗಳ್ಳನಿಗೆ ನೀಡುವ ಬದಲು ತನ್ನ ಕೆಲಸ ಅಂದರೆ ಸಾರ್ವಜನಿಕ ಕೆಲವನ್ನು ಮಾಡುವ ರಾಜಕಾರಣಿಗೆ ಮತ ನೀಡಬೇಕು. ಹಣ – ಹೆಂಡಕ್ಕೆ ನಾವು ಮತ ಮಾರಿಕೊಂಡದ್ದೆ ಆದರೆ ನಮ್ಮ ಕೆಲಸಗಳನ್ನು ಮಾಡಿಕೊಡಿ ಎಂದು ಕೇಳುವ ನೈತಿಕತೆಯನ್ನೆ ನಾವು ಕಳೆದುಕೊಂಡು ಬಿಡುತ್ತೇವೆ. ಅಂದಂತೆ ರಾಜಕಾರಣಿಗಳೂ ಕೂಡ ಕೋಟ್ಯಂತರ ಹಣವನ್ನು ಚುನಾವಣೆಯುಲ್ಲಿ ಚೆಲ್ಲಿ ಅದರ ಹತ್ತು ಪಟ್ಟು ಹಣವನ್ನು ತಮ್ಮ ಐದುವರ್ಷಗಳ ಅವಧಿಯಲ್ಲಿ ಕಮಾಯಿಸಿಕೊಂಡುಬಿಡುತ್ತಾರೆ.

ಎಲ್ಲಿವರೆಗೆ ನಾವು ಪ್ರಜೆಗಳೆ ಪ್ರಭುಗಳು ಎಂದು ತಿಳಿಯುವುದಿಲ್ಲವೋ, ರಾಜಕಾರಣಿಗಳಿರುವುದು ನಮ್ಮ ಸೇವೆಗಾಗಿ ಎಂದು ಭಾವಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಎಲ್ಲ ರೀತಿಯು ಸುಲಿಗೆಗಳು ನಡೆದೆ ನಡೆಯುತ್ತವೆ. ಚುನಾವಣೆಯ ಈ ಸಂದರ್ಭದಲ್ಲಿ ನಿಮ್ಮೆಲ್ಲರ ಕೈ ಮುಗಿದು ನಿಮ್ಮ ಬಳಿಗೆ ಓಟು ಕೇಳಲು ಬರುವ ರಾಜಕಾರಣಿ ಆತ ಗೆದ್ದು ಬಂದ ಅನಂತರ ನೀವೇ ಆತನಿಗೆ ಕೈಮುಗಿದು , ಹಲ್ಲು ಗಿಂಜುತ್ತ ನಿಲ್ಲುವ ಪರಿ ಪ್ರಜಾಪ್ರಭುತ್ವಕ್ಕೊಂದು ಕಳಂಕ. ಪ್ರಜೆಗಳಾದವರ ನೋವು ನಲಿವಿಗೆ – ಕೆಲಸ ಕಾರ್ಯಗಳಿಗೆ ಮಿಡಿಯಬೇಕಾದದ್ದು

**ಎಲ್ಲಿವರೆಗೆ ನಾವು ಪ್ರಜೆಗಳೆ ಪ್ರಭುಗಳು ಎಂದು ತಿಳಿಯುವುದಿಲ್ಲವೋ, ರಾಜಕಾರಣಿಗಳಿರುವುದು ನಮ್ಮ ಸೇವೆಗಾಗಿ ಎಂದು ಭಾವಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಎಲ್ಲ ರೀತಿಯ ಸುಲಿಗೆಗಳು ನಡೆದೆ ನಡೆಯುತ್ತವೆ. ಚುನಾವಣೆಯ ಈ ಸಂದರ್ಭದಲ್ಲಿ ನಿಮ್ಮೆಲ್ಲರ ಕೈ ಮುಗಿದು ನಿಮ್ಮ ಬಳಿಗೆ ಓಟು ಕೇಳಲು ಬರುವ ರಾಜಕಾರಣಿ ಆತ ಗೆದ್ದು ಬಂದ ಅನಂತರ ನೀವೇ ಆತನಿಗೆ ಕೈಮುಗಿದು , ಹಲ್ಲು ಗಿಂಜುತ್ತ ನಿಲ್ಲುವ ಪರಿ ಪ್ರಜಾಪ್ರಭುತ್ವಕ್ಕೊಂದು ಕಳಂಕ.**



೨೭ ನೇ ಪುಟಕ್ಕೆ

# ಬಸವಳಿದಿರುವ ಖರ್ಗೆ ಬೆವರೊರೆಸಿಕೊಳ್ಳುತ್ತಿರುವ ರೇವುನಾಯಕ



ನಿಜಕ್ಕೂ ಖರ್ಗೆಯ ಮುಖ ಕಳಾಹೀನವಾಗಿದೆ. ಬಿಸಿಲನಾಡಿನ ತವರು ಕಲಬುರ್ಗಿಯ ಬಿಸಿಲಿಗೆ ಖರ್ಗೆ ಒಂದು ರೀತಿಯಲ್ಲಿ ಬಸವಳಿದಿದ್ದರೆ ಇನ್ನೊಂದು ಕಡೆ ಹೈಕಮಾಂಡ ಸೂಚನೆಯ ಮೇರೆಗೆ ಪ್ರತಿಪಕ್ಷ ಸ್ಥಾನಕ್ಕೆ ನೀಡಿದ ರಾಜೀನಾಮೆಯಿಂದ ತಲ್ಲಣಗೊಂಡಿದ್ದಾರೆ. ಮುಖಕ್ಕೆ ರಾಚುವಂತೆ ಒಂದೆ ಸಮ ರಪ ರಪ ಬಡಿಯುವ ಬಿಸಿಲು ಒಂದೆಡೆಯಾದರೆ ಒಲ್ಲದ ಕೆಲಸಕ್ಕೆ ಹೈರಾಣಾಗಿ ಇಡೀ ಕಲಬುರ್ಗಿ ಸಂಸದೀಯ ಕ್ಷೇತ್ರದ ತುಂಬೆಲ್ಲ ತಿರುಗುವುದು ಅವರನ್ನು ನಿರುತ್ಸಾಹಗೊಳಿಸಿದೆ. ಆದರೆ ಸೋಲಿಲ್ಲದ ಸರದಾರ ಎಂಬ ಖ್ಯಾತಿ ಪಕ್ಕಾಗಿದ್ದ ಮಲ್ಲಿಕಾರ್ಜುನ ಖರ್ಗೆ ಕಲಬುರ್ಗಿಯ ಸಂಸದೀಯ ಕ್ಷೇತ್ರದಲ್ಲಿ ನಿಂತು ಗೆದ್ದು ಬರುವ ಮೂಲಕ ತಾನೊಬ್ಬ ಅಜೇಯ ನಾಯಕನೆನಿಸಿಕೊಳ್ಳುವ ದಾವಾನಲ ಅವರನ್ನು ಹೈರಾಣು ಮಾಡಿದೆ.

ಸೇಡಂನ ಶರಣಪ್ರಕಾಶ ಪಾಟೀಲ ಎಂಬ ಚೇಲಾನನ್ನು **ಎಂದಿನಂತೆ** ತನ್ನ ಹಿಂದೆ ಇಟ್ಟುಕೊಂಡು ಖರ್ಗೆ ಇಡೀ ಕ್ಷೇತ್ರದ ತುಂಬ ಅಕ್ಷರಶಃ ಅಂಡಲೆಯುತ್ತಿದ್ದಾರೆ. ಮೊದಲೆ ಕರ್ಕಶವಾಗಿದ್ದ ಧ್ವನಿ ಇದೀಗ ಮಾತಾಡಿ ಮಾತಾಡಿ ಸಂಪೂರ್ಣ ಕುಗ್ಗಿ ಹೋದಂತೆ ಭಾಸವಾಗುತ್ತಿದೆ. ಮಗ ಪ್ರಿಯಾಂಕಖರ್ಗೆ ಕೂಡ ಬಿಡುವಿಲ್ಲದೆ ಪ್ರಚಾರದಲ್ಲಿ ತೊಡಗಿದ್ದಾರೆ. ನಾಮಪತ್ರ ಸಲ್ಲಿಸಿದ ದಿನ ಕಲಬುರ್ಗಿಯಲ್ಲಿ ಖರ್ಗೆ ತನ್ನ ಪ್ರಬಲ ಎದುರಾಳಿ ರೇವುನಾಯಕ ಬೆಳಮಗಿ ಕುರಿತು " ಬೆಳಮಗಿಗಿ ಇಂಗ್ಲೀಷ ಬರಂಗಿಲ್ಲ. ಸರ್‍ಯಾಗಿ ಸಾಲಿ ಸಹಿತ ಕಲ್ತೀಲ್ಲ. ಇಂಥವ್ರನ್ ದಿಲ್ಲಿಯ ಸಂಸತ್ತಿಗೆ ಕಳಿಸಿದರ ಏನ್ ಮಾಡ್ಲಿಕ ಸಾಧ್ಯ ? " ಎಂಬ ಮಾತುಗಳು ಇವರ ಹತಾಶ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದ್ದವು.

ಖರ್ಗೆಯ ಮಾತುಗಳನ್ನು ಕೇಳಿ ಬೆಳಮಗಿ ಪ್ರತಿಯಾಗಿ " ಕ್ಷೇತ್ರದ ಬೆಳವಣಿಗೆಯ ವಿಚಾರದಲ್ಲಿ ನನಗೂ ಹಾಗೂ ಖರ್ಗೆ ಅವರಿಗೂ ಬಹಿರಂಗ ಅದಾಲತ್ ನಡೆಯಲಿ , ನನಗ ಇಂಗ್ಲೀಷ ಬರೋದಿಲ್ಲ ಖರೆ. ಆದ್ರ ಇದಿರಿನವರು ಮಾತಾಡಿದ್ರ ತಿಳಕೋತೀನಿ. ಹಿಂದಿ ಭಾಷೆ ಚೆನ್ನಾಗಿ ಮಾತಾಡ್ತೀನಿ. ತುಸು ದಿನ ತಡೀರಿ, ಇಂಗ್ಲೀಷ ಸಹ ಕಲಿತೀನಿ. ಹಾಗಂತ ಭಾಷೆ ಬರಲ್ಲ, ದೇಶ - ಕಾಲ ಜ್ಞಾನ ಇಲ್ಲ ಅಂದ್ರ ನಾ ಹ್ಯಾಂಗ್ ಸುಮ್ಮಕುಡ್ಬೇಕು? ಖರ್ಗೆವರು ಹಗುರ ಮಾತಾಡುವುದನ್ನು ನಿಲ್ಲಿಸಲಿ, ಯುವಕನಿದ್ದಾಗ ಕುಸ್ತಿ ಆಡಿದ್ದೇನೆ ; ಈಗ ರಾಜಕೀಯ ಕುಸ್ತಿ ಎದುರಿಸಲು ತಯಾರಾಗಿದ್ದೇನೆ "ಎಂದು ಗುಡುಗಿದರು. ಆಗಲೇ ಖರ್ಗೆ ಕೊಂಚ ತಣ್ಣಗಾದರು.

ಹಾಗೆ ನೋಡಿದರೆ ಮಲ್ಲಿಕಾರ್ಜುನ ಖರ್ಗೆಗಿಂತಲೂ ವ್ಯಕ್ತಿಯಾಗಿ ಬೆಳಮಗಿ ಜನಸಾಮಾನ್ಯನಿಗೆ ತೀರಾ ಹತ್ತಿರವಾಗುತ್ತಾರೆ. ನಾಲ್ಕು ಸಲ ಸತತವಾಗಿ ಗೆದ್ದು ಬಂದರೂ



ಬೆಳಮಗಿ

ತಾವೆಲ್ಲಿಯೂ ತಮ್ಮ ಠೇಂಕಾರವನ್ನು ಪ್ರದರ್ಶಿಸಿದವರಲ್ಲ. ಮಂತ್ರಿಯಾಗಿಯೂ ಸಾದಾ ಸೀದಾ ಇರಬಲ್ಲರು. ಆದರೆ ಖರ್ಗೆಯವರ ಕುರಿತು ಈ ರೀತಿ ಹೇಳಲಿಕ್ಕೆ ಆಗುವುದಿಲ್ಲ.

ಕಲಬುರ್ಗಿ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಂಟು ವಿಧಾನಸಭಾ ಕ್ಷೇತ್ರಗಳಿವೆ. ಎಂಟರ ಪೈಕಿ ಐದು ಕ್ಷೇತ್ರಗಳಲ್ಲಿ ಕಾಂಗ್ರೆಸ ಶಾಸಕರೆ ಇದ್ದಾರೆ. ಮೂರು ಕಡೆ ಬಿ.ಜೆ.ಪಿಯ ಶಾಸಕರು ಗೆದ್ದು ಬಂದಿದ್ದಾರೆ. ಇದೆಲ್ಲ ನೋಡಿದರೆ ಖರ್ಗೆ ಅನಾಯಾಸ ಗೆಲುವು ಸಾಧಿಸಬಹುದು ಎಂದು ಎಣಿಕೆಹಾಕಬಹುದು. ದುರಂತವೆಂದರೆ ಮಲ್ಲಿಕಾರ್ಜುನ ಖರ್ಗೆ ಆಗಾಗ ಸಂದರ್ಭಾನುಸಾರ ಇಲ್ಲಿನ ತನ್ನದೆ ಪಕ್ಷದ ಶಾಸಕರೊಂದಿಗೆ ನಡಕೊಂಡ ರೀತಿ – ರಿವಾಜುಗಳು, ಟಿಕೇಟ್ ನೀಡುವಾಗ ನಡೆದ ವೈಮನಸ್ಸುಗಳು ಈ ಚುನಾವಣೆಯಲ್ಲಿ ಕೆಲಸ ಮಾಡಿದ್ದೆ ಆದರೆ ಖರ್ಗೆಯ ದಿಲ್ಲಿಯ ಕನಸು ಕನಸಾಗಿಯೆ ಉಳಿಯುತ್ತದೆ. ಮತ್ತೊಂದು ಮಹತ್ವದ ಅಳುಕೆಂದರೆ ಖರ್ಗೆ ಪರಿಶಿಷ್ಟಜಾತಿಗೆ ಸೇರಿದ ವ್ಯಕ್ತಿಯಾಗಿದ್ದರಿಂದ ಈತ ಬೈಚಾನ್ಸ್ ಗೆದ್ದು ಬಂದರೆ ಇಡೀ ಮತಕ್ಷೇತ್ರದ ತುಂಬ ಅದೇ ಜನಾಂಗದವರ ಉಪಟಳ ಹೆಚ್ಚಾಗಬಹುದೆಂಬ ಸಣ್ಣ ಆತಂಕವನ್ನು ಚೆಡ್ಡಿಗಳು ಮೇಲ್ವರ್ಗದವರ ಮನದದಲ್ಲಿ ಬೇರುಬಿಡುವಂತೆ ನೋಡಿಕೊಳ್ಳುತ್ತಿದೆ. ಆದರೆ ಖರ್ಗೆ ಇದುವರೆಗೆ ಪ್ರತಿನಿಧಿಸುತ್ತಿದ್ದ ಗುರಮಿಠಕಲ್ ಕ್ಷೇತ್ರದಲ್ಲಿಯೇ ಆಗಿರಲಿ, ಈಗ ಪ್ರತಿನಿಧಿಸುತ್ತಿರುವ ಚಿತ್ತಾಪುರ ಮತಕ್ಷೇತ್ರದಲ್ಲಿಯೆ ಆಗಲಿ ಇಂಥ ಒಂದಾನೊಂದು ಪ್ರಕರಣವು ದಾಖಲಾಗಿಯೇ ಇಲ್ಲ ಎಂಬ ಸತ್ಯ ಎಲ್ಲರೂ ಅರಿಯಬೇಕಿದೆ. ಕ್ಷೇತ್ರದಲ್ಲಿ ಮೊದಲ ಸ್ಥಾನದಲ್ಲಿರುವ ಲಿಂಗಾಯತರು ಚಡ್ಡಿಗಳು ಹಬ್ಬಿಸಿದ ಈ ಗಾಳಿಸುದ್ದಿಗೆ ಕಿವಿಗೊಡದೆ , ಬಿ.ಜೆ.ಪಿ.ಯಂಥ ಕೋಮುವಾದಿಯನ್ನು ಅಪ್ಪಿಕೊಂಡರೆ ಬಸವಣ್ಣನವರು ಹಾಗೂ ಅವರ ತತ್ವಗಳ ಜೊತೆ ನಾವೂ ಸಮಾಧಿಯಾಗುತ್ತೇವೆ ಎಂಬ ಅರಿವು ಇಟ್ಟುಕೊಂಡುದ್ದೆ ಆದರೆ ಚಮತ್ಕಾರಿಕ ಫಲಿತಾಂಶಪಡೆಯಬಹುದಾಗಿದೆ. ಒಟ್ಟು ೧೫ ಲಕ್ಷ ೧೪ ಸಾವಿರ ೪೯೦ ಮತದಾರಿರುವ ಈ ಕ್ಷೇತ್ರದಲ್ಲಿ ಬಂಜಾರ,ಬೋವಿ,ಕೊರವ ,ಮಾದಿಗ, ಚನ್ನಯ್ಯ ಸೇರಿದಂತೆ ಹಲವಾರು ದಲಿತ ಉಪ ಜಾತಿಯ ಮತದಾರರು ಇದ್ದಾರೆ.

ಖರ್ಗೆಗೆ ಬಂದೊದಗಿರುವ ಈ ದುಸ್ಥಿತಿಯ ಲಾಭವನ್ನು ಪಡೆಯಲೆ ಬೇಕೆಂದು ಹೊಂಚುಹಾಕಿರುವ ಚಡ್ಡಿಗಳಾದ ಶಶೀಲ ನಮೋಶಿ, ಮನೋಹರ ಮಸ್ಕಿ, ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಯ ಅಮರನಾಥ ಪಾಟೀಲ, ಚಂದ್ರಶೇಖರ ಪಾಟೀಲ ರೇವೂರ ಮುಂತಾದವರೆಲ್ಲ ಸ್ಕೇಚ್ ಹಾಕಿಕೊಂಡೆ ಪ್ರಚಾರದ ಕಣಕ್ಕೆ ಧುಮುಕಿದ್ದಾರೆ. ತಮ್ಮ ಮುಖಂಡನಾದ



ಯಡ್ಡಿ ಲಿಂಗಾಯತರೆಂತಲೂ ಆತ ಇದುವರೆಗೆ ಕೋಟ್ಯಂತರ ರೂಪಾಯಿಗಳನ್ನು ಧರ್ಮದ ಕೇಂದ್ರಗಳಾದ ಮಠ – ಮಂದಿರಗಳಿಗೆ ಹಣಕಾಸು ಒದಗಿಸಿದ ಧರ್ಮಬೀರುವಾಗಿದ್ದಾರೆ ಎಂದೆಲ್ಲ ತಾವು ಹೋದಲ್ಲಿ ಬಂದಲ್ಲಿ ಒಂದೆ ಸಮ ಬೊಬ್ಬೆ ಹೊಡೆಯುತ್ತಿದ್ದಾರೆ.

ಜೆ.ಡಿ.ಎಸ್. ಪಕ್ಷದಿಂದ ನಿಲ್ಲಲೂ ಒಬ್ಬ ಅಭ್ಯರ್ಥಿ ಸಿಕ್ಕಿದ್ದಾರೆಂಬುದೆ ಒಂದು ಹೆಗ್ಗಳಿಕೆ. ಬಾಬು ಹೊನ್ನಾನಾಯಕ ಎಂಬ ಜನಸಾಮಾನ್ಯನಿಗೆ ಚಿರಪರಿಚಿತವಲ್ಲದ ವ್ಯಕ್ತಿ ರೇವುನಾಯಕ ಬೆಳಮಗಿಯ ಜಾತಿ ಓಟುಗಳನ್ನು ಕಸಿಯಬಲ್ಲವನಾದರೆ ಖರ್ಗೆ ಗ್ಯಾರಂಟಿ ದಿಲ್ಲಿಗೆ ದೌಡುಹಾಕುತ್ತಾರೆ. ಮತ್ತೊಂದು ತಮಾಷೆಯ ಸಂಗತಿಯೆಂದರೆ ಬಿಜೆಪಿಯ ರೇವೂನಾಯಕ ಬೆಳಮಗಿಯಾಗಲಿ, ಮಲ್ಲಿಕಾರ್ಜುನ ಖರ್ಗೆಯವರೇ ಆಗಲಿ ಗೆದ್ದುಬಿಟ್ಟರೆ ಅವರು ಈ ಹಿಂದೆ ಪ್ರತಿನಿಧಿಸುತ್ತಿದ್ದ ವಿಧಾನಸಭಾ ಮತಕ್ಷೇತ್ರದಲ್ಲಿ ತಮ್ಮ ತಮ್ಮ ಮಕ್ಕಳಿಗೆ ಬಿಟ್ಟುಕೊಡುವ ಹುನ್ನಾರಕೂಡ ನಡೆಯುತ್ತಿದೆ. ಬೈಛಾನ್ಸ ಸೋತರಂತೂ ಶಾಸಕತ್ವದ ಸ್ಥಾನವಂತೂ ಇದ್ದೇ ಇದೆ.

ಆದರೂ ಖರ್ಗೆ ಗೆದ್ದು ಬರಲೇ ಬೇಕಾದ ಅನಿವಾರ್ಯತೆಗೆ ಸಿಕ್ಕಿದ್ದಾರೆ. ಒಂದು ವೇಳೆ ಅವರು ಸೋತರೆ ಅವರ ಇಪ್ಪು ವರ್ಷಗಳ ರಾಜಕೀಯದ ಪರಾಮರ್ಶೆ ನಡೆಯುತ್ತದೆ. ಕೀಳು ಜಾತಿರಾಜಕೀಯವನ್ನು ಮಾಡುತ್ತ, ಧರ್ಮದ ಹೆಸರಿನ ಮೇಲೆ ಜನಸಾಮಾನ್ಯನ ಪ್ರಜ್ಞೆಯ ಮೇಲೆ ಕಲ್ಲುಹಾಕುತ್ತಿರುವ ನೀಚ ಚಡ್ಡಿಗಳಿಗೆ ಸರಿಯಾದ ಟಾಂಗುಕೊಡುವ ಸಮಯ ಇದೆಂದು ಕಲಬುರ್ಗಿ ಲೋಕಸಭೆಯ ಜನತೆ ನಿರ್ಧರಿಸಿದರೆ ಖರ್ಗೆ ಗ್ಯಾರಂಟಿ ಗೆಲ್ಲುತ್ತಾರೆ. ಆಗ ಅನಿವಾರ್ಯವಾಗಿ ರೇವೂನಾಯಕ ಬೆಳಮಗಿ ಎಂಬ ಸಂಭಾವಿತ ಚೆಡ್ಡಿಗಳು ಉಪಾಯವಾಗಿ ಕೆಡವಿಹಾಕಿದ ಖೆಡ್ಡಾದಲ್ಲಿ ಬೀಳುತ್ತಾನೆ.

**ಖರ್ಗೆ ಪರಿಶಿಷ್ಟಜಾತಿಗೆ ಸೇರಿದ ವ್ಯಕ್ತಿಯಾಗಿದ್ದರಿಂದ ಈತ ಬೈಚಾನ್ಸ್ ಗೆದ್ದು ಬಂದರೆ ಇಡೀ ಮತಕ್ಷೇತ್ರದ ತುಂಬ ಅದೇ ಜನಾಂಗದವರ ಉಪಟಳ ಹೆಚ್ಚಾಗಬಹುದೆಂಬ ಸಣ್ಣ ಆತಂಕವನ್ನು ಚೆಡ್ಡಿಗಳು ಮೇಲ್ವರ್ಗದವರ ಮನದದಲ್ಲಿ ಬೇರುಬಿಡುವಂತೆ ನೋಡಿಕೊಳ್ಳುತ್ತಿದೆ. ಆದರೆ ಖರ್ಗೆ ಇದುವರೆಗೆ ಪ್ರತಿನಿಧಿಸುತ್ತಿದ್ದ ಗುರಮಿಠಕಲ್ ಕ್ಷೇತ್ರದಲ್ಲಿಯೋ ಆಗಿರಲಿ, ಈಗ ಪ್ರತಿನಿಧಿಸುತ್ತಿರುವ ಚಿತ್ತಾಪುರ ಮತಕ್ಷೇತ್ರದಲ್ಲಿಯೆ ಆಗಲಿ ಇಂಥ ಒಂದಾನೊಂದು ಪ್ರಕರಣವು ದಾಖಲಾಗಿಯೇ ಇಲ್ಲ ಎಂಬ ಸತ್ಯ ಎಲ್ಲರೂ ಅರಿಯಬೇಕಿದೆ.**



# ನೀ ಇಲ್ಲದ ಈ ಬದುಕು ಏಕೆ ?

ನನ್ನ ಪ್ರೀತಿಯ ಹುಡುಗ

ಒಂದೊಂದು ಸಲ ಹುಡುಗಾಟಿಕೆಗಾಗಿ ನೀ ಇಲ್ಲದೆ ಇರುವ ಬದುಕನ್ನು ಕಲ್ಪಿಸಿಕೊಂಡು ನೋಡಬೇಕೆಂದು ಹೊರಡುತ್ತೇನೆ. ಛೇ..ಛೇ.. ಅದು ಎಂಥ ಭಯಾನಕ. ಕ್ಷಣ ಕ್ಷಣಕ್ಕೂ ಹೃದಯ ಹಿಂಡುವ ವೇದನೆ. ಒಳಗೊಳಗೆ ಅದೆಂಥದೋ ತಲ್ಲಣ. ಕಣ್ಣಾಲೆಗಳೆಲ್ಲ ಒಳಗೆ ಹೋಗಿ ತಮ್ಮ ಪ್ರಕರವಾದ ಬೆಳಕನ್ನು ಬಚ್ಚಿಟ್ಟುಕೊಂಡು ಮಂಕಾಗಿಸುವ ಗುದುಮುರಗಿ. ಮೈ ತುಂಬ ನೂರಾರು ತಂತಿಗಳು ಎತ್ತೇತ್ತಲೋ ಜಗ್ಗಾಡುತ್ತಿರುವ ಅನುಭವ. ಸಹಸ್ರಾರು ಸುಂದರ ಭಾವಗಳು ಒಂದೊಂದಾಗಿ ನನ್ನನ್ನು ಬಿಟ್ಟು ವಿದಾಯ ಹೇಳುತ್ತಿರುವ ಘಳಿಗೆ ನೆನೆದರಂತೂ ಕಣ್ಣುಗಳು ತಂತಾನೆ ನೀರಾಡುತ್ತವೆ.

ಯಾರೊಂದಿಗೂ ಬೆರೆಯದೆ , ಒಂಟಿಯಾಗಿ ನಿನ್ನ ನೆನಪಿನ ಹುತ್ತದಲ್ಲಿ ಮುದುಡಿ ಕೂಡಬೇಕೆನಿಸುತ್ತದೆ. ಆ ನೆನಪುಗಳೊಂದಿಗೆ ನಾನು ಮೇಣದ ಬತ್ತಿಯಂತೆ , ಉರಿ ಕಂಡ ಕರ್ಪೂರದಂತೆ ಕರಕರಗಿ ಇಲ್ಲವಾಗಬೇಕೆನಿಸುತ್ತದೆ. ಬಹುಶಃ ಅಕ್ಕಮಹಾದೇವಿ ತನ್ನ ಸಂಗಾತಿ ಚೆನ್ನಮಲ್ಲಿಕಾರ್ಜುನನ ಹುಡುಕುತ್ತ ಹುಡುಕುತ್ತ ಕಂಡ ಕಂಡ ಚಿಲಿಪಿಲಿ ಎಂದುಲಿಯುವ ಗಿಳಿಗಳಿರಾ ನೀವು ಕಾಣಿರೆ ? ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ? ಎಂದು ತಹತಹದಿಂದ ಕೇಳುತ್ತಾಳೆ. ಅವನಿಗಾಗಿ ಇಡೀ ಬದುಕನ್ನೆ ಮುಡಿಪಾಗಿಟ್ಟು ಕಾಯುತ್ತಾಳೆ. ಆತ ಬರುಬರುತ್ತಲೆ ಆತನೊಂದಿಗೆ ಸವೆಸಬೇಕಾದ ಬದುಕಿನ ಕುರಿತು ಕನಸು ಕಟ್ಟುತ್ತಾಳೆ.

ಬಹುಶಃ ನೀ ನನ್ನಿಂದ ಸರಿದು ದೂರ ಹೋದಾಗ ಬಹುಶಃ ನಾನು ಹುಚ್ಚಿಯೇ ಆಗಿರುತ್ತೇನೆ. ಅಕ್ಕನಂತೆ ಕಂಡ ಕಂಡವರ ಮುಂದೆಲ್ಲ ಹಲುಬುತ್ತ ನಿನಗಾಗಿ ತಹತಹಿಸುತ್ತೇನೆ. ನೀ ಇಲ್ಲದ ನನ್ನ ಬದುಕಿಗೆ ಅಸ್ತಿತ್ವವಾಗಲಿ , ಲವಲವಿಕೆಯಾಗಲಿ ಇಲ್ಲವೆ ಇಲ್ಲ. ನೀನೇ ನನಗೆ ಎಲ್ಲ. ನನ್ನ ಬೇಕು ಬೇಡ, ಸಂಭ್ರಮ - ಸುಖ , ಹಿಗ್ಗು- ಸಂತೋಷ, ಸರ್ವ ಹಾಗೂ ಸರ್ವಸ್ವವೂ ನೀನೇ.

ನನ್ನ ಬದುಕಿನ ಮೊದಲ ಪುಟ ಆರಂಭವಾಗಿರುವುದೆ ನಿನ್ನ ಹೆಸರಿನಿಂದ. ಈ ಬದುಕು ಬೆಳೆದು , ಹಬ್ಬಿ, ನಳನಳಿಸಲೇಬೇಕಾದರೆ ನೀ ನನ್ನ ಜೊತೆಗೆ ಇರಲೇ ಬೇಕು. ನೀ ಇಲ್ಲದ ಈ ಬಿಕನಾಸಿ ಬದುಕು ಯಾರಿಗೆ ಬೇಕು ? ಯಾವುದಕ್ಕೆ ಬೇಕು ?

ಎಂದೆಲ್ಲ ಆಲೋಚಿಸಿ ಕ್ಷಣ , ಬೆವತು ಹೋದೆ. ಇದೆಲ್ಲ ನಿಜವಲ್ಲ ಎಂದು ನೆನೆದು ಸುಮ್ಮನಾದೆ.

ಂ ಕನಸು

ಕುಹೆರೊಳಗಿನ ಬಾ



# ಶಹಾಪುರ ಪುರಸಭೆಯಲ್ಲಿ ಏನೆಲ್ಲ ನಡೆಯುತ್ತಿದ್ದರೂ ಶಾಸಕರು ಗಪ್ ಚುಪ್ ಕುಳಿತದ್ಯಾಕೆ ?



ಕಳೆದ ಸಂಚಿಕೆಯಲ್ಲಿ ಶಹಾಪುರ ಪುರಸಭೆಯ ಬಾರಾಬಾನಗಡಿಯ ಕುರಿತ ತಮ್ಮ ಸಂಪೂರ್ಣ ತನಿಖಾ ವರದಿ ಓದಿದೆ. ನಿಜಕ್ಕೂ ತಮಗೆ ಅಭಿನಂದನೆಗಳು. ವಿರೋಧ ಪಕ್ಷದ ಸ್ಥಾನದಲ್ಲಿ ಕುಳಿತಿರುವ ಪುರಸಭೆಯ ಸದಸ್ಯರು ಈಗಾಗಲೇ ಈ ಬಗ್ಗೆ ಕೂಗು ಹಾಕಬೇಕಾಗಿತ್ತು. ಈ ಮೂಲಕ ಪುರಸಭೆಯಲ್ಲಿ ಪ್ರಗತಿಯ ಹೆಸರಿನ ಮೇಲೆ ನಡೆದಿರುವ ಹಜಾಮತಿಗೆ ಕಡಿವಾಣ ಹಾಕಬಹುದಾಗಿತ್ತು.

ಆಶ್ಚರ್ಯವೆಂದರೆ ಅವರೂ ಭ್ರಷ್ಟಾಚಾರದಲ್ಲಿ ಶಾಮೀಲಾಗಿದ್ದಾರೆಂದು ನನಗೆ ಅನಿಸುತ್ತದೆ. ಪುರಸಭೆಯ ಚುನಾವಣೆಯ ಸಂದರ್ಭದಲ್ಲಿ ಎಲ್ಲಾ ವಾರ್ಡಗಳಲ್ಲಿ ನಿಂತು ನಾವು ಗೆದ್ದು ಬಂದ ನಂತರ ಅದು ಮಾಡುತ್ತೇವೆ, ಇದು ಮಾಡುತ್ತೇವೆ ಎಂದೆಲ್ಲ ಬಣ್ಣದ ಮಾತುಗಳನ್ನು ಆಡಿ ಗೆದ್ದು ಬಂದ ನಂತರ ಮತದಾರರಿಗೆ ಕೊಟ್ಟ ಆಶ್ವಾಸನೆಗಳನ್ನು ಮರೆಯುತ್ತ ಪರ್ಸೆಂಟೇಜ್ ಫಿಕ್ಸ ಮಾಡಿಕೊಂಡು ಕುಳಿತುಬಿಡುತ್ತಾರೆ. ಇದು ಪ್ರಜ್ಞಾವಂತ ಮತದಾರರೆಲ್ಲ ತಲೆತಗ್ಗಿಸುವ ಸಂಗತಿಯಾಗಿದೆ.

ಮತ್ತೊಂದು ತಮಾಷೆಯ ಹಾಗೂ ನಾಚಿಕೆಗೇಡಿನ ಸಂಗತಿಯೆಂದರೆ ಪುರಸಭೆಯಲ್ಲಿ ನಡೆದಿರುವ ಈ ಅಡ್ನಾಡಿ ದಂಧೆಯ ಕುರಿತು ಕೇಳಬೇಕಾದ ಶಾಸಕ ಮಹಾಶಯ ಶರಣಬಸಪ್ಪಗೌಡ ದರ್ಶನಾಪುರ ಕೂಡ ಮೌನವಾಗಿದ್ದಾರೆ. ಶಹಾಪುರ ಪಟ್ಟಣದ ನಾಗರಿಕರಿಂದ ವಸೂಲಿಯಾದ ತೆರಿಗೆ ಹಣದಲ್ಲಿ ( ಸುಮಾರು ಎರಡುವರೆ ಲಕ್ಷ ) ತಮ್ಮ ಸನ್ಮಾನಕ್ಕಾಗಿ ಖರ್ಚು ಮಾಡಿದ್ದು ಗೊತ್ತಿದ್ದೂ ಸುಮ್ಮನಿರುತ್ತಾರೆಂದರೆ ಏನರ್ಥ ?

ನಮ್ಮ ವಾರ್ಡ ನಂಬರ್ ಎಂಟರಲ್ಲಿ ಶಾಲೆಯೆ ಇಲ್ಲ. ಆದರೆ ಪುರಸಭೆಯವರು ಮಾತ್ರ, ಇಲ್ಲದ ಶಾಲೆಗೆ ೪೫,೩೩೧/- ರೂಪಾಯಿಗಳ ಕಂಪೌಂಡ್ ಬೇರೆ ಕಟ್ಟಿದ್ದಾರೆ. ಅಲ್ಲದೆ ತಾಲೂಕಾ ಜೆ.ಡಿ.ಎಸ್. ಅಧ್ಯಕ್ಷ ಬಸವರಾಜ ಅರುಣಿ ಮನೆಯಿಂದ ಶ್ರೀ ಚಂದ್ರಶೇಖರ ಆರಬೋಳ ಅವರ ಮನೆಯವರೆಗೆ - ಆನೇಗುಂದಿಯವರ ಮನೆಯಿಂದ ಮಿಟ್ಟಬಾವಿಯವರೆಗೆ ಸಿ.ಸಿ.ರೋಡ ಹಾಗೂ ಡ್ರ್ಯಾನೇಜ್ ಮಾಡಿಸಿದ್ದಾರಂತೆ. ಇದೆ ಓಣಿಯಲ್ಲಿ ದಿನ ನಿತ್ಯ ಓಡಾಡುವ ನಮಗೆ ಈ ಎರಡೂ ಕಾಮಗಾರಿಗಳು ಮಾಡಿದ ಸಣ್ಣ ಸುಳಿವು ಕೂಡ ನಮಗೆ ಸಿಗುತ್ತಿಲ್ಲ. ಆದರೆ ಪುರಸಭೆಯವರ ಫೈಲ್‌ಗಳಲ್ಲಿ ಮಾತ್ರ ಕೆಲಸ ಸಂಪೂರ್ಣ ಮುಗಿಸಿದ ಬಿಲ್ ಗಳಿವೆ. ಇವೆಲ್ಲ ಏನನ್ನು ತೋರಿಸುತ್ತದೆ ? ಇದನ್ನೆಲ್ಲ ಕೇಳಬೇಕಾದ ಶಾಸಕ ತಾನು ಬಾಯಿಗೆ ಚಿಕ್ಕ ಹಾಕಿಕೊಳ್ಳುವ ಬದಲು ತಿರುಗಾಡಿ ಮೇಯ್ಯುತ್ತಿರುವಾಗ , ಉಳಿದ ಸದಸ್ಯರು ಅಧ್ಯಕ್ಷರು, ಸರಕಾರಿ ಅಧಿಕಾರಿಗಳು ಓಡಾಡಿ ಮೇಯ್ಯುತ್ತಿದ್ದಾರೆ. ಇದನ್ನು ನೋಡಿಯೂ ನೋಡದಂತಿರುವ ಬಿ.ಜೆ.ಪಿಯ ಶಿವಶೇಖರಪ್ಪ ಪಾಟೀಲ ಶಿರವಾಳ, ಮಲ್ಲಣ್ಣ ಮಡ್ಡಿ, ಉಕ್ಕನಾಳ ಡಾ. ಮಲ್ಲಣ್ಣಗೌಡ ಮುಂತಾದವರಿಗೆ ಏನಾಗಿದೆ ?

ಸಾಮಾನ್ಯ ಪ್ರಜೆಯೆ ಎದ್ದು ಪುರಸಭೆಯ ಕಡೆ ನಡೆದರೆ ಆಗ ಯಾರೂ ಉಳಿಯಲಾರರು. ಅಲ್ಲವೆ ?

೦ ಬಸವರಾಜ ಆನೇಗುಂದಿ , ಶಹಾಪುರ

## ಪಾಪು ಪುಟ

# ದುಃಖ ಜೀವನದಲ್ಲಿ ಸಮೃದ್ಧತೆಯನ್ನು ತುಂಬುತ್ತದೆ



ಹರಳು ಹುರಿದಂತೆ ಸ್ಪಷ್ಟ ಮಾತು.ಯಾರಪ್ಪನಿಗೆ ಸಿಟ್ಟು ಬಂದರೂ ಸೈ ಇದ್ದುದ್ದನ್ನು ಇದ್ದಂತೆ ಹೇಳುವ ಗುಣ. ಕಾಣಿಯಸೋಲ ಅರ್ಧಗಾಣಿಯ ಗೆಲ್ಲ ಎಂಬ ಮನೋಭಾವ.

ಜೀವನವನ್ನು ಸಂಪೂರ್ಣ ಸವೆಯೆ ಬಳಸಬೇಕೆಂಬ ತುಡಿತದ ಪಾಪು ಅವರಂಥವ ಮಾತು ನಮ್ಮ ಬದುಕಿಗೆ ಒಂದು ಬೆಳಕು.

ದುಃಖವು ಪ್ರಾಣಿಗೋಸುಗ ಅಲ್ಲ. ಮನುಷ್ಯರಿಗೋಸ್ಕರ ನಿರ್ಮಾಣಗೊಂಡಿದೆ. ದುಃಖವನ್ನು ಹಚ್ಚಿಕೊಂಡು ಕುಳಿತುಕೊಳ್ಳಬಾರದು. ಅದನ್ನೇ ನೆಚ್ಚಿಕೊಂಡರೆ ಅವನು ಮನುಯನೆನಿಸುವುದಿಲ್ಲ, ಮನುಷ್ಯನಾದವನು ತನ್ನ ದುಃಖವನ್ನು ಮೆಟ್ಟಿ ನಿಲ್ಲಬೇಕು.

ಬರೀ ತಮ್ಮ ದುಃಖಗಳ ಬಗೆಗೇ ಹೇಳಿಕೊಳ್ಳುವವರು , ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಾರಲ್ಲದೇ, ಹೆಚ್ಚು ಮಾಡಿಕೊಳ್ಳುವುದಿಲ್ಲ. ದುಃಖಪಟ್ಟವನಿಗೇ ಸುಖ ಎಂದರೆ ಏನೆನ್ನುವುದು ತಿಳಿಯುತ್ತದೆ.

ಮನುಷ್ಯನಿಗೇ ಆಗುವ ದುಃಖಗಳು ಅವನಿಗೆ ಮೊದಲೇ ಕಂಡಿದ್ದರೆ, ಅವನ ಜೀವನದಲ್ಲಿ ಸ್ವಾರಸ್ಯವೇ ಇರುತ್ತಿರಲಿಲ್ಲ. ಜೀವನದಲ್ಲಿ ಈಗ ನಾವು ಹೆಮ್ಮೆ ಪಟ್ಟುಕೊಂಡು ಹೇಳಿಕೊಳ್ಳುವ ಅನೇಕ ಮಹತ್ಕಾರ್ಯಗಳು ಎಂದೂ ಸಂಭವಿಸುತ್ತಲೇ ಇರಲಿಲ್ಲ.

ತನ್ನ ದುಃಖದಿಂದ ಮನುಷ್ಯನು ಹೊಸ ಅನುಭವಗಳನ್ನು ಪಡೆದುಕೊಳ್ಳುತ್ತಾನೆ. ಆ ಹೊಸ ಅನುಭವಗಳಿಂದಲೇ ಅವನು ಹೊಸ ಸಾಹಸಗಳಿಗೆ ಕೈ ಹಾಕುತ್ತಾನೆ. ಹೊಸತನವನ್ನು ತಂದುಕೊಳ್ಳುತ್ತಾನೆ. ಹೊಸ ಮನುಷ್ಯನೆನಿಸುತ್ತಾನೆ. ಜಗತ್ತಿನಲ್ಲಿ ದುಃಖ ಇದೆ ; ಅದು ನಿರ್ವಿವಾದ. ಮನುಷ್ಯರಿಗೆ ದುಃಖ ಬಂದಾಗಲೇ ಅವರು ಒಬ್ಬರೊಬ್ಬರನ್ನು ಗುರುತಿಸಿಕೊಳ್ಳುತ್ತಾರೆ. ಸುಖ ಬಂದಾಗ ಎಲ್ಲರೂ ಮನುಷ್ಯನೊಂದಿಗೆ ಇರುತ್ತಾರೆ. ದುಃ ಬಂದಾಗ ಎಷ್ಟು ಜನ ಅವನೊಂದಿಗೆ ಉಳಿಯುತ್ತಾರೆ ಎನ್ನುವುದು ಆ ಕಾಲದಲ್ಲಿಯೇ ಪರೀಕ್ಷೆಗೆ ಒಳಗಾಗುತ್ತದೆ. ಪವೆ ಒಳ್ಳೆಯದಿದ್ದಾಗ ಅವನೊಂದಿಗೆ ಇರುವ ಜನರು ಹವೆ ಕೆಟ್ಟಾಗ ಅವನೊಂದಿಗೆ ಇರುವುದಿಲ್ಲ. ಬೆಂಕಿಯಿಂದ ಕಬ್ಬಿಣ ಮೃದುವಾಗುವಂತೆ ದುಃಖದಿಂದ ಮನುಷ್ಯನ ಹೃದಯ ಮೃದು ಆಗುತ್ತದೆ. ಉತ್ಕಟವಾದ ದುಃಖವೇ ಶ್ರೇಷ್ಠ ಕಾವ್ಯದ ರಚನೆಗೆ ಕಾರಣವಾಗುತ್ತದೆ. ಆಳವಾದ ಅನಿಸಿಕೆಯು ಎಲ್ಲ ಸೃಜನಶೀಲತೆಯ ಮೂಲದಲ್ಲಿ ಇದೆ.

ಜೀವನದಲ್ಲಿ ಕಷ್ಟ ಇರಬೇಕು. ಕಾಳಜಿ ಇರಬೇಕು. ಸಂಕೀರ್ಣತೆ ಇರಬೇಕು. ಹೃದಯ ಬಿರಿಯುವ ವ್ಯಥೆ ಇರಬೇಕು. ಅವು ಇದ್ದರೇನೇ ಜೀವನದಲ್ಲಿ ರುಚಿ ಇರುತ್ತದೆ. ಆನಂದ ಇರುತ್ತದೆ. ಅವುಗಳಿಂದಲೇ ಜೀವನವು ಅಪೇಕ್ಷಣೀಯವೆನಿಸುತ್ತದೆ. ಸ್ವಾರಸ್ಯ ಇದ್ದರೇನೇ ಜೀವನವು ಸಂತೋಷವನ್ನು ಕಾಣುತ್ತದೆ. ದುಃಖವು ಮನುಷ್ಯರಲ್ಲಿ ಮಾನವತೆಯನ್ನು ತುಂಬುತ್ತದೆ. ಕಣ್ಣೀರಿನಿಂದಲೇ ಜಗತ್ತು ಫಲವತ್ತತೆಯನ್ನು ಪಡೆಯುತ್ತದೆ.

# ಗಂಗೆಯಲ್ಲಿ ನಿಮ್ಮ ಶಾಸ್ತ್ರವನ್ನು ಬಿಸುಟಿರಿ



o ಜ.ಹೋ.ನಾರಾಯಣಸ್ವಾಮಿ , ಹಾಸನ

ಬುದ್ಧಿ ಅವಶ್ಯಕ. ಏಕೆಂದರೆ ಅದು ಇಲ್ಲದೇ ಇದ್ದರೆ ನಾವು ಅನೇಕ ಮೂಢನಂಬಿಕೆಗಳಿಗೆ ಬೀಳುತ್ತೇವೆ. ಎಷ್ಟೋ ತಪ್ಪುಗಳನ್ನು ಮಾಡುತ್ತೇವೆ. ಬುದ್ಧಿ ಇದನ್ನು ತಡೆಯುತ್ತದೆ.

ವೇದ,ಬೈಬಲ್, ಖುರಾನ್, ಪುರಾಣಗಳು ಹಾಗೂ ಎಲ್ಲಾ ಪವಿತ್ರ ಗ್ರಂಥರಾಶಿಗಳಿಗೂ ಕೊಂಚಕಾಲದವರೆಗೆ ವಿಶ್ರಾಂತಿ ಪಡೆಯಲಿ. ದೇಶವೆಲ್ಲ ದಯೆ ಮತ್ತು ಪ್ರೇಮದ ಪ್ರತ್ಯಕ್ಷ ದೇವರನ್ನು ಆರಾಧಿಸಲಿ. ವಿಭಕ್ತವಾಗಿರುವ ಪ್ರತಿಯೊಂದು ಭಾವನೆಯೂ ಬಂಧನಕಾರಿ,ಭೇದರಹಿತವಾದ ಪ್ರತಿಯೊಂದು ಭಾವನೆಯೂ ಮುಕ್ತಿ.ಪ್ರಾಂಪಚಿಕತೆಯಿಂದ ಪೂರ್ಣಮತ್ತರಾಗಿರುವ ಜನಗಳ ಮಾತು ಭಯಗೊಳಿಸದಿರಲಿ.

ಚರಿತ್ರೆ,ಸಾಹಿತ್ಯ, ಪುರಾಣ ಮುಂತಾದ ಶಾಸ್ತ್ರಗ್ರಂಥಗಳೆಲ್ಲಾ ಮನುಷ್ಯನಿಗೆ ಕೇವಲ ಭಯವನ್ನೇ ತೋರಿಸುತ್ತವೆ. ಅವನನ್ನು ಕುರಿತು ನೀನು ನರಕಕ್ಕೆ ಹೋಗುವೆ, ನಿಗೆ ಇನ್ನು ಮಾರ್ಗವಿಲ್ಲ ಎಂದು ಮಾತ್ರ ಹೇಳುತ್ತವೆ. ಆದ್ದರಿಂದಲೇ ಈ ಉತ್ಸಾಹರಾಹಿತ್ಯವೂ,ದೌರ್ಬಲ್ಯವೂ ಭರತಖಂಡಕ್ಕೆ ಅಸ್ಥಿಗತವಾಗಿ ಬಿಟ್ಟಿದೆ. ಆದಕಾರಣ ವೇದ ವೇದಾಂತಗಳ ಉಚ್ಛಭಾವಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕಾಗಿದೆ.

ಜನಾಂಗವನ್ನು ಎಚ್ಚರಿಸಬೇಕು. ನಾವು ಜಗತ್ತನ್ನು ಎಚ್ಚರಿಸಬೇಕು. ಕಾಡುಹರಟೆ ಕೆಲಸಕ್ಕೆ ಬಾರದ ಪೂಜೆ ಮುಂತಾದವುಗಳು ಸಾಕು.

ಕೇವಲ ಮಕ್ಕಳನ್ನು ಹುಟ್ಟಿಸಿದರೆ ತಂದೆಯಾಗುವುದಿಲ್ಲ. ನಮ್ಮ ಹೆಗಲ ಮೇಲೆ ಅತ್ಯಂತ ದೊಡ್ಡ ಜವಾಬ್ದಾರಿಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಆಹಾರ ವಸ್ತುಗಳ ಅಭಾವದಿಂದ ಇಡೀ ದೇಶವೇ ಹಾಹಾಕಾರದಿಂದ ತುಂಬಿದೆ. ದೇಶ ಅಧೋಗತಿಗಿಳಿದಿದೆ. ಇದನ್ನು ಪರಿಹರಿಸಲು ನೀವೇನು ಮಾಡುತ್ತಿರುವಿರಿ ? ಗಂಗೆಯಲ್ಲಿ ನಿಮ್ಮ ಶಾಸ್ತ್ರವನ್ನು ಬಿಸುಟು ಜನರಿಗೆ ಮೊದಲು ಅನ್ನ ವಸ್ತ್ರ ಸಂಪಾದಿಸುವ ಹಾದಿಯನ್ನು ಬೋಧಿಸಿ.

## ವಿಚಾರಗಳು

ಜಾತಿಯು ಇರಬೇಕೆ ? ಹೋಗಬೇಕೆ ? ಎಂಬ ಪ್ರಶ್ನೆಗೂ ನನಗೂ ಸಂಬಂಧವಿಲ್ಲ. ಅತಿ ದೀನನೂ ದರಿದ್ರನೂ ಆದವನ ಮನೆಯ ಬಾಗಿಲಿಗೆ ಭರತಖಂಡದಲ್ಲಿ ಮತ್ತು ಹೊರಗೆ ಮಹಾವ್ಯಕ್ತಿಗಳು ಆಲೋಚಿಸಲಿ, ಜಾತಿ ಇರಬೇಕೆ ಬೇಡವೇ ಎಂದು. ಜೀವನ, ಅದರ ಬೆಳವಣಿಗೆ ಮತ್ತು ಅದು ಆರೋಗ್ಯದಿಂದ ಇರುವುದಕ್ಕೆ ಸ್ವತಂತ್ರ ಆಲೋಚನೆ ಮತ್ತು ಕಾರ್ಯ ಅತ್ಯಾವಶ್ಯಕ. ಇದು ಎಲ್ಲಿ ಇಲ್ಲವೋ ಅಲ್ಲಿಯ ಮನುಷ್ಯ, ಅಲ್ಲಿಯ ಜನಾಂಗ, ಅಲ್ಲಿಯ ದೇಶ ಅವನತಿಗೆ ಇಳಿಯುವುದು.

ಸಿದ್ಧಾಂತವನ್ನು ಲೆಕ್ಕಿಸಬೇಡಿ.ಮೂಢನಂಬಿಕೆಯನ್ನು ಲೆಕ್ಕಿಸಬೇಡಿ,ಕೋಮು, ಚರ್ಚು,ದೇವಸ್ಥಾನ ಇವುಗಳನ್ನು ಲೆಕ್ಕಿಸಬೇಡಿ.ಪ್ರತಿಯೊಬ್ಬ ಮಾನವನ ಜೀವನದ ಸಾರವಾದ ಆಧ್ಯಾತ್ಮದೊಂದಿಗೆ ಇದನ್ನು ಹೋಲಿಸಿದರೆ ಇವಕ್ಕೆ ಬೆಲೆ ಇಲ್ಲ. ಮನುಷ್ಯನಲ್ಲಿ ಇದು ಹೆಚ್ಚು. ವಿಷದವಾಗಿ ಸ್ಪಷ್ಟವಾಗಿ ತೋರಿದಷ್ಟು ಸತ್ಕಾರ್ಯ ಸಾಧನೆಗೆ ಅವನು ಮಹಾಶಕ್ತಿಯಾಗುವನು. ಮೊದಲು ಅದನ್ನು ಸಂಪಾದಿಸಿ, ಸಾಧಿಸಿ, ಯಾರನ್ನೂ ದೂರಬೇಡಿ. ಎಲ್ಲಾ ಕೋಮುಗಳ ಮತಗಳಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಧರ್ಮವೆಂದರೆ ಮಾತಲ್ಲ, ಹೆಸರಲ್ಲ, ಪಂಗಡವಲ್ಲ ; ಅದು ಆಧ್ಯಾತ್ಮಿಕ ಸಾಕ್ಷಾತ್ಕಾರವೆಂಬುದನ್ನು ನಿಮ್ಮ ಜೀವನದಲ್ಲಿ ತೋರಿ. ಯಾರು ಇದನ್ನು ಅನುಭವಿಸುವರೋ, ಅವರು ಮಾತ್ರ ಇದನ್ನು ತಿಳಿದುಕೊಳ್ಳಬಲ್ಲರು. ಯಾರಲ್ಲಿ ಆಧ್ಯಾತ್ಮಿಕತೆ ಇದೆಯೊ ಅವರು ಮಾತ್ರ ಮತ್ತೊಬ್ಬರಿಗೆ ಇದನ್ನು ಕೊಡಬಲ್ಲರು, ಮಾನವಕೋಟಿಯ ಮಹಾಗುರುವಾಗಬಲ್ಲರು.

ಒಂದು ಚರ್ಚಿನಲ್ಲಿ ಹುಟ್ಟುವುದು ಒಳ್ಳೆಯದು. ಆದರೆ ಅಲ್ಲೇ ಸಾಯುವುದು ಕೆಟ್ಟದ್ದು... ಯುವಕನು ಚರ್ಚಿಗೆ ಹೋಗದೆ ಇದ್ದರೆ ಅವನನ್ನು ಬಲಾತ್ಕರಿಸಬೇಕು.ಆಧರೆ ವೃದ್ಧನು ಇನ್ನೂ ಚರ್ಚಿಗೆ ಹೋಗುತ್ತಿದ್ದರೆ ಅವನಿಗೆ ಬುದ್ಧಿಯನ್ನು ಹೇಳಬೇಕು.

ಸ್ವರ್ಗವಿದೆಯೋ ನರಕವಿದೆಯೋ ಎಂಬುದು ಯಾರಿಗೆ ಬೇಕು ? ಆತ್ಮನಿರವನೋ ? ಇಲ್ಲವೋ ಅದರಿಂದ ಏನಾಗಬೇಕು ? ಶಾಶ್ವತವಾದ ಒಂದು ವಸ್ತುವಿದೆಯೋ ಇಲ್ಲವೋ ಯಾರಿಗೆ ಬೇಕದು ? ನಮ್ಮ ಕಣ್ಣೆದುರಿಗೆ ಪ್ರಪಂಚವಿದೆ. ಅದು ದುಃಖದಿಂದ ತುಂಬಿ ತುಳುಕಾಡುತ್ತಿದೆ. ಬುದ್ಧನಂತೆ ಅದರಲ್ಲಿ ಪ್ರವೇಶಿಸಿ ದುಃಖವನ್ನು ಕಡಿಮೆ ಮಾಡಲು ಪ್ರಯತ್ನಿಸಿ ಇಲ್ಲವಾದರೆ ಆ ಮಹಾಪ್ರಯತ್ನದಲ್ಲಿ ನಿಮ್ಮ ಪ್ರಾಣವನ್ನು ಕೊಡಿ. ಮೊದಲುನಿಮ್ಮನ್ನುನೀವು ಮರೆಯಿರಿ ; ನೀವು ಆಸ್ತಿಕರೋ, ನಾಸ್ತಿಕರೋ ಯಾರಾದರಾಗಲಿ, ಕಲಿಯಬೇಕಾದ ಮೊದಲ ಪಾಠವಿದು. ಮೊದಲು ಕ್ಷುದ್ರಾತ್ಮನ ನಾಶ, ಆನಂತರ ಅಲ್ಲಿ ನಿಜವಾದ ಆತ್ಮನ ಸ್ಥಾಪನೆ. ಎಲ್ಲರೂ ನಿಸ್ಸಂದೇಹವಾಗಿ ಕಲಿಯಬೇಕಾದ ಬುದ್ಧಿವಾದವಿದು.

ನಮಗೆ ನಾವೇ ಮಿತಿಯನ್ನು ಕಲ್ಪಿಸಿಕೊಳ್ಳುತ್ತಿರುವೆವು. ಅದೇ ನಮ್ಮ ಕೊರಳಿಗೆ ಕಟ್ಟಿದ ಸರಪಳಿಯಂತೆ ನಮ್ಮನ್ನು ಈ ಸ್ಥಿತಿಗೆ ತಂದಿರುವುದು. ಆ ಸರಪಳಿಯನ್ನು ಕಿತ್ತುಹಾಕಿ ಸ್ವತಂತ್ರರಾಗಿ, ನಿಯಮವೆಂಬುದನ್ನು ನಿಮ್ಮ ಕಾಲಿನಿಂದ ತುಳಿಯಿರಿ. ಮಾನವ ಪ್ರಕೃತಿಯಲ್ಲಿ ನಿಯಮವೆಂಬುದಿಲ್ಲ. ಹಣೆಯ ಬರಹವೆಂಬುದಿಲ್ಲ. ಅದಥಷ್ಟವೆಂಬುದಿಲ್ಲ. ಅನಂತದಲ್ಲಿ ನಿಯಮ ಹೇಗೆ ಬರುವುದು ? ಸ್ವಾತಂತ್ರ್ಯವೇ ಅದರ ಆಜನ್ಮಸಿದ್ಧ ಹಕ್ಕು. ಮೊದಲು ಸ್ವತಂತ್ರರಾಗಿ.... ಯಾರಿಂದಲೂ ಏನನ್ನೂ ನಿರೀಕ್ಷಿಸಬೇಡಿ. ಇದುವರೆಗೆ ನಿಮಗೆ ಆಗಿರುವುದನ್ನು ಪರೀಕ್ಷೆ ಮಾಡಿನೋಡಿದರೆ, ಎಂದೆಂದಿಗೂ ಬರದ ಇನ್ನೊಬ್ಬರ ಸಹಾಯಕ್ಕೆ ನೀವು ನೆಚ್ಚಿ ಕುಳಿತುದು ನಿರರ್ಥಕವೆಂಬುದು ನಿಮಗೆ ಗೊತ್ತಾಗುವುದರಲ್ಲಿ ನನಗೆ ಸಂದೇಹವೇ ಇಲ್ಲ. ಬಂದ ಸಹಾಯವೂ ನಿಮ್ಮ ಒಳಗಿನಿಂದಲೇ ಬಂದಿದೆ. ನೀವು ಯಾವುದಕ್ಕೆ ಪ್ರಯತ್ನಪಟ್ಟರೋ ಅದರ ಪ್ರತಿಫಲ ಮಾತ್ರ ನಿಮಗೆ ಸಿಕ್ಕತು.... ನಮ್ಮನ್ನು ಬಂದಿಸಿದ ಬೇಡಿಗಳನ್ನು ಇದುವರೆವಿಗೂ ನಾವೇ ಕಟ್ಟಿಸಿಕೊಳ್ಳುತ್ತಿರುವೆವು.

# ಪ್ರಶಸ್ತಿಗಳಿಗಾಗಿ ಮಾತ್ರ ತಾವು ಸಿನೇಮಾ ಮಾಡುತ್ತೀರಾ ?



ಸಿನೆಮಾ ಪ್ರಭಾವ ಬೀರಿದಷ್ಟು ಬೇರೆ ಮತ್ತಾವ ಮಾಧ್ಯಮವೂ ಜನರ ಮೇಲೆ ಪ್ರಭಾವ ಬೀರುವುದಿಲ್ಲ. ಸಿನೆಮಾ ನಮ್ಮ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ ಎಂಬುದು ಕರ್ನಾಟಕದ ಖ್ಯಾತ ನಿರ್ದೇಶಕ ಗಿರೀಶ ಕಾಸರವಳ್ಳಿ ಅವರ ಅಭಿಮತ. ತಾವು ನಿರ್ದೇಶಿಸಿದ ಅಷ್ಟೂ ಚಿತ್ರಗಳಿಗೆ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದ ಕರ್ನಾಟಕದ ಏಕೈಕ ನಿರ್ದೇಶಕ ಗಿರೀಶ ಕಾಸರವಳ್ಳಿಯವರು. ಕಲಾತ್ಮಕ ಚಿತ್ರ ನಿರ್ದೇಶಿಸಿ ಅದನ್ನು ಜನಪ್ರಿಯಗೊಳಿಸುವಲ್ಲಿ ಸಿದ್ಧಹಸ್ತರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕಾಸರವಳ್ಳಿಯ ರೈತ ಕುಟುಂಬದಲ್ಲಿ ಜನಿಸಿದ ಇವರೊಂದಿಗೆ ಮಾತಾಡುತ್ತಿದ್ದರೆ ಕನ್ನಡ ಚಿತ್ರೋದ್ಯಮದ ಹೊಸ ಲೋಕವೆ ತೆರೆದುಕೊಳ್ಳುತ್ತದೆ. ಶಿವಮೊಗ್ಗದಲ್ಲಿ ಭೇಫಾರ್ಮಸಿ ಮುಗಿಸಿ, ಪುಣೆಯ ಫಿಲ್ಮ ಮತ್ತು ಟೆಲಿವಿಷನ್ ಇನ್ಸಿಟ್ಯೂಟ್ ನಲ್ಲಿ ನಿರ್ದೇಶನದ ತರಬೇತಿ ಪಡೆದಿದ್ದಾರೆ.

ತೀರಾ ಇತ್ತೀಚೆಗೆ ಗುಲಬರ್ಗಾಕ್ಕೆ ಆಗಮಿಸಿದಾಗ ಅವರೊಂದಿಗೆ ಮಾತಾಡುವ ಅವಕಾಶವೊಂದು ಒದಗಿ ಬಂತು. ಅದನ್ನು ಪತ್ರಿಕೆಯು ಓದುಗರಿಗೆ ಇಲ್ಲಿ ಕೊಡಮಾಡಲಾಗಿದೆ.

**ಪತ್ರಿಕೆ :** ಕಲಾತ್ಮಕ ಚಿತ್ರಗಳಿಗಿಂತ ಇಂದು ಕಮರ್ಷಿಯಲ್ ಚಿತ್ರಗಳೆ ಜಾಸ್ತಿ ಮಿಂಚುತ್ತಿವೆಯಲ್ಲ?

**ಕಾಸರವಳ್ಳಿ :** ಚಿತ್ರಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಕಮ್ಮಿ ಅನಿಸ್ತಾ ಇವೆ. ಆದರೆ ಅಪರೂಪಕ್ಕೊಮ್ಮೆ ಒಳ್ಳೆಯ ಚಿತ್ರಗಳು ಬರುತ್ತಿವೆ.

**ಪತ್ರಿಕೆ :** ಕಲಾತ್ಮಕ ಚಿತ್ರಗಳನ್ನು ಜನ ನೋಡುವುದಿಲ್ಲ ಎಂಬ ಆರೋಪ ಇದೆಯಲ್ಲ ?

**ಕಾಸರವಳ್ಳಿ :** ಜನ ಸೇರುತ್ತಿಲ್ಲ ಎಂಬುದು ಸುಳ್ಳು. ಕಲಾತ್ಮಕ ಚಿತ್ರಗಳ ಪ್ರದರ್ಶನಕ್ಕೆ ಅವಕಾಶ ಸಿಗುತ್ತಿಲ್ಲ. ಹಿಂದೆ ಕರ್ನಾಟಕದಲ್ಲಿ ೧೩೦೦ ಥೇಟರ್ ಗಳಿದ್ದವು. ಈಗ ಕೇವಲ ೬೦೦ ಥೇಟರ್ ಗಳಿವೆ. ಇದು ಕಲಾತ್ಮಕ ಚಿತ್ರಗಳ ಪ್ರದರ್ಶನಕ್ಕೆ ಹೊಡೆತ ಕೊಟ್ಟ ಕಾರಣಗಳಲ್ಲಿ ಪ್ರಮುಖವಾಗಿದೆ.

**ಪತ್ರಿಕೆ :** ಕಲಾತ್ಮಕ ಚಿತ್ರಗಳ ಪ್ರದರ್ಶಕ್ಕೆ ಸರಕಾರ ಜನ ಸಮುದಾಯ ಮಾಡಬೇಕಾದುದೇನು ?

**ಕಾಸರವಳ್ಳಿ :** ಸರಕಾರವ ನೆರವು ನೀಡುತ್ತಿದೆ. ಚಿತ್ರೋದ್ಯಮ ಆಸ್ಥೆ ತೋರಿಸಿ ಈ ರೀತಿಯ ಸಿನೆಮಾ ಪ್ರದರ್ಶನಕ್ಕೆ ಮುಂದಾಗಬೇಕು.

ಸಮುದಾಯದ ವಿವಿಧ ಸಂಘಟನೆಗಳು ಬೇರೆ ಬೇರೆ ರೀತಿಯ ಕಾರ್ಯಕ್ರಮಗಳನ್ನು ಆಯೋಜಿಸುವದರೊಂದಿಗೆ ಇಂಥ ಚಿತ್ರಗಳ ಪ್ರದರ್ಶನ ಮಾಡಿಸಬೇಕಾಗಿದೆ.

**ಪತ್ರಿಕೆ :** ನೀವು ಕೇವಲ ಪ್ರಶಸ್ತಿಗಾಗಿ ಕಲಾತ್ಮಕ ಚಿತ್ರಗಳನ್ನು ನಿರ್ದೇಶಿಸುತ್ತೀರಿ ಎಂಬ ಆರೋಪವಿದೆಯಲ್ಲ ?

**ಕಾಸರವಳ್ಳಿ :** ಜನ ಸಮುದಾಯ ಉತ್ತಮ ಚಿತ್ರಗಳನ್ನು ನೋಡಲಿ ಎಂದು ಉತ್ತಮ ಚಿತ್ರಗಳನ್ನು ನಿರ್ದೇಶಿಸುವುದು ಅಪರಾಧವೆ ? ಇದು ಸಿನೆಮಾ ವಿತರಕರು ಹಾಗೂ ಪ್ರದರ್ಶಕರು ನಡೆಸುತ್ತಿರುವ ವ್ಯವಸ್ಥಿತ ಅಪಪ್ರಚಾರ. ಇಂಥ ಆಪಾದನೆಗಳಲ್ಲಿ ಯಾವುದೆ ಹುರುಳಿಲ್ಲ.

**ಪತ್ರಿಕೆ :** ಒಂದು ಕಾದಂಬರಿ ಅಥವಾ ಕತೆಯನ್ನು ಆಧರಿಸಿ ಚಿತ್ರ ನಿರ್ದೇಶಿಸುವಾಗ ಯಾವ ಎಚ್ಚರಿಕೆ ವಹಿಸಬೇಕು ?

**ಕಾಸರವಳ್ಳಿ :** ಒಂದು ಮೂಲ ಕಥೆಗೆ ನಿಷ್ಠವಾಗಿರಬೇಕು. ಇನ್ನೊಂದು ಆ ಕಥೆಗಳಿಗೆ ಅನುಗುಣವಾಗಿ ಹಿಗ್ಗಿಸುವುದು ಮಾರ್ಪಾಟು ಮಾಡುವ ಮೂಲಕ ಇವತ್ತಿನ ತಲ್ಲಣಗಳನ್ನು ಸೆರೆ ಹಿಡಿಯಬೇಕು.

**ಪತ್ರಿಕೆ :** ನಿಮ್ಮ ಮುಂದಿನ ನಿರ್ದೇಶನದ ಚಿತ್ರ ಯಾವುದು ?

**ಕಾಸರವಳ್ಳಿ :** ಅಮರೇಶ ನುಗಡೋಣಿ ಅವರ ಸವಾರಿ ಕತೆ ಆಧರಿಸಿ ಸದ್ಯದಲ್ಲಿಯೆ ಚಿತ್ರ ನಿರ್ದೇಶಿಸುವೆ.

ಘಟಶ್ರಾದ್ಧ, ತಾಯಿಸಾಹೇಬ, ನಾಯಿ ನೆರಳು, ತಬರನ ಕಥೆ, ದ್ವೀಪ , ಗುಲಾಬಿ ಟಾಕೀಜ್ ಮುಂತಾದ ಜನಪರವಾದ , ಜೀವಪರವಾದ ಕತೆಗಳನ್ನು ಜನಸಾಮಾನ್ಯನಿಗೆ ತಲುಪಲು ಶ್ರಮಿಸಿದ ಕಾಸರವಳ್ಳಿಗೆ ನಮನ ಹೇಳುತ್ತ ಹೊರಬಂದೆ.

ಕೃಪೆ : ಪ್ರಜಾವಾಣಿ

೦ ಶಿವರಂಜನ್ ಸತ್ಯಂಪೇಟೆ



ಒಂದು ಮೂಲ ಕಥೆಗೆ ನಿಷ್ಠವಾಗಿರಬೇಕು. ಇನ್ನೊಂದು ಆ ಕಥೆಗಳಿಗೆ ಅನುಗುಣವಾಗಿ ಹಿಗ್ಗಿಸುವುದು ಮಾರ್ಪಾಟು ಮಾಡುವ ಮೂಲಕ ಇವತ್ತಿನ ತಲ್ಲಣಗಳನ್ನು ಸೆರೆ ಹಿಡಿಯಬೇಕು.



ಇಂದಿನ ಕಷ್ಟಗಳು ನಾಳಿನ ಭವಿಷ್ಯದ ಸುಖಕ್ಕಾಗಿ – ಸುಭಾಷಿತ

## ಪರಿಣಾಮ

ನೀ
ನನ್ನಿಂದ
ದೂರ ಸರಿಯುತ್ತಲೆ
ಕನಸುಗಳೆಲ್ಲ
ಸಾಮೂಹಿಕವಾಗಿ
ಉರುಲು ಹಾಕಿಕೊಂಡವು

೦ ಸೋಮು

# ನೀರಸ ಬದುಕಿಗೆ ಫುಲ್ ಸ್ಟಾಪ್ ಹಾಕಿರಿ !



ಅದೇನು ಕಾರಣವೋ ಮದುವೆಯಾಗಿ ನಾಲ್ಕಾರು ವರ್ಷ ಕಳೆಯುತ್ತಲೆ ತಮ್ಮ ದಾಂಪತ್ಯ ಜೀವನವೆ ಮುಗಿದು ಹೋದಂತೆ ಅನೇಕರು ಮಾತಾಡುತ್ತಾರೆ. ನಮ್ಮದೆಲ್ಲ ಈಗ ಆಯ್ತು. ನೀವು ಹೇಗೆ ಇರುತ್ತೀರೋ ನಾವೂ ನೋಡುತ್ತೇವೆ ಎಂದು ಹೇಳುವ ಮೂಲಕ ತಾವು ಕಾಲನ ತೆಕ್ಕೆಗೆ ಬಿದ್ದವರಂತೆ ಒಣ ವೇದಾಂತದ ಮಾತು ಆಡತೊಡಗುತ್ತಾರೆ.

ಹೀಗೆ ಮಾತಾಡುವ ಹೆಣ್ಣೆ ಆಗಿರಲಿ , ಗಂಡೇ ಆಗಲಿ ತಮ್ಮ ಸುಮಧುರ ಜೀವನದ ತಗ್ಗನ್ನು ತಾವೇ ತೋಡಿಕೊಳ್ಳುತ್ತಿದ್ದಾರೆಂದೆ ಅರ್ಥ. ಬದುಕಿನಲ್ಲಿ ಕ್ಷಣ ಕ್ಷಣಕ್ಕೂ ಬರುವ ಸವಿ ಘಳಿಗೆಗಳನ್ನು ಸವಿಯಲಾಗದೆ ನೀರಸ ಬದುಕಿಗೆ ತಾವೇ ಮುನ್ನುಡಿ ಬರೆದಿಟ್ಟುಕೊಳ್ಳುತ್ತಾರೆ.

ಈ ಕಾರಣಗಳಿಂದಲೆ ತಮ್ಮ ಡ್ರೆಸ್‌ಗಳ ಬಗೆಗಾಗಲಿ , ತಮ್ಮ ದೇಹದ ಬಾಹ್ಯ ಸೌಂದರ್ಯದ ಕುರಿತಾಗಲಿ ಎಳ್ಳಷ್ಟು ಕಾಳಜಿಯನ್ನು ಇಟ್ಟುಕೊಳ್ಳಲಾರರು. ಮದುವೆಯಾಗಿ, ಒಂದೆರಡು ಮಕ್ಕಳಾದರೆ ತಮ್ಮದೆಲ್ಲ ಮುಗಿದೇ ಹೋಯ್ತು ಎಂದು ಆಡಿಕೊಳ್ಳುವವರು ತಮ್ಮ ನೀರಸ ಬದುಕಿನ ಪುಟಗಳನ್ನು ಒಂದೊಂದಾಗಿ ತೆರೆಯುತ್ತಿದ್ದಾರೆಂದೆ ಅರ್ಥ.

ಸದಾ ಲವಲವಿಕೆಯಿಂದ - ಹೊಸ ತುಡಿತಗಳೊಂದಿಗೆ ಬದುಕು ಮಿಳಿತವಾಗಬೇಕಿತ್ತು. ಸಂತೋಷದ ಹೊನಲನ್ನು ಚೆಲ್ಲುತ್ತ ಆ ಬದುಕಿನ ಬಳ್ಳಿ ದಾಂಡುಗಿ ಇಟ್ಟು ಬೆಳೆಯಬೇಕಾಗಿತ್ತು. ಆಕಾಶಕ್ಕೂ ಏಣಿ ಕಟ್ಟಿ ಏರಬೇಕಾಗಿತ್ತು. ಆಗಲೆ ಬದುಕಿಗೆ - ಆ ಮೂಲಕ ಜೀವನಕ್ಕೆ ಒಂದು ಕಳೆ ಬರುತ್ತದೆ. ಆದರೆ ನಿರುತ್ಸಾಹ , ನೀರಸತೆ ನಿಮ್ಮ ಬದುಕಿನಲ್ಲಿ ತಲೆ ಎತ್ತಿಬಿಟ್ಟರೆ ?

ನೀವು ನಿಂತ ನೆಲವೆ ಕುಸಿದು ನಿಮ್ಮನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಗಾಢವಾದ ಕತ್ತಲೆಗೆ ನಿಮ್ಮನ್ನು ದೂಡುತ್ತದೆ. ಕನಸುಗಳೆಲ್ಲ ಒಂದೊಂದಾದಿ ನಿಮ್ಮನ್ನು ಬಿಟ್ಟು ಓಡುತ್ತವೆ. ನಿಮ್ಮ ದೈಹಿಕ ಕಸೂವೂ ತನ್ನ ಶಕ್ತಿಯನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತದೆ. ಆಗ ಹೊತ್ತು ಗಳೆಯುವುದೆ ಕಷ್ಟವಾಗುತ್ತದೆ. ಆಗ ನಿಮಗೆ ಪ್ರತಿಯೊಂದು ಘಟನೆ, ವ್ಯಕ್ತಿ ಕೂಡ ಕಿರಿಕಿರಿಯ ವಸ್ತುವಾಗುತ್ತಾರೆ.ಇಂಥ ನೀರಸ ಬದುಕನ್ನು ನೀವು ಅಪ್ಪಿಕೊಂಡು ಅದೇಗೆ ಜೀವನ ಸಾಗಿಸುತ್ತಿರಿ ? ಶಿವನೊಲಿಸಬಂದ ಈ ಪ್ರಸಾದ ಕಾಯವನ್ನು ಸುಖಾ ಸುಮ್ಮನೆ ಹಾಳುಮಾಡಿಕೊಳ್ಳುವುದೇಕೆ ?

ಇಂಥ ಸಂದಿಗ್ಧ ಸಂದರ್ಭದಲ್ಲಿ ನೀವು ಮಾಡಬೇಕಾದುದು ಇಷ್ಟೆ : ಇವು ನಿಮ್ಮ ಬದುಕಿನಲ್ಲಿ ಬಂದಿರುವ ತಾತ್ಕಾಲಿಕ ಕಪ್ಪು ನೆರಳುಗಳು. ಈ ನೆರಳುಗಳು ದಾಟುತ್ತಲೆ ಮುಂದೆ

ಬೆಳಕು ಇದ್ದೆ ಇದೆ. ಬೆಳಕು ತಂತಾನೆ ಬರಲಿ ಎಂದು ಕಾಯುವ ಬದಲು ನೀವು ಆ ಬೆಳಕಿನತ್ತ ನಡೆಯಲು ಶುರುಮಾಡಿ, ಸಂಗೀತದ ಕಡೆ ಕೊಂಚ ಗಮನಹರಿಸಿ, ಹಾಡುಗಳನ್ನು ಕೇಳಿ, ಸಾಧ್ಯವಾದರೆ ನೀವೂ ತನ್ಮಯವಾಗಿ ಹಾಡಿ. ಈ ಹಾಡಿನ ಮೂಲಕ ನಿಮ್ಮ ಮನದ ಮೂಲೆಯಲ್ಲಿ ಗಂಟುಕಟ್ಟಿಕೊಂಡು ಕುಳಿತ್ತಿದ್ದ ನೀರಸತೆಯ ಮಂಜು ತಂತಾನೆ ಕರಗಿ ಹೋಗುತ್ತದೆ.

ಮನುಷ್ಯ ಪ್ರಕೃತಿಯ ಕೂಸು. ಏನೆಲ್ಲ ಇದ್ದೂ ಆತ ಮತ್ತೆ ಮತ್ತೆ ತಿರುಗಿ ನೋಡುವುದು ಅದೆ ಪ್ರಕೃತಿಯನ್ನ. ಕಾರಣ ನೀವು ಇಂದಿನಿಂದಲೆ ಪ್ರಕೃತಿಯನ್ನು ನೋಡುತ್ತ ಕುಳಿತುಕೊಳ್ಳಿ. ಹಸಿರನ್ನು – ಚಲಿಸುವ ಮೋಡಗಳನ್ನು – ಮೋಹಕವಾಗಿ ಬೆಳೆದಿರುವ ಗಿಡ – ಮರ – ಬಳ್ಳಿಗಳನ್ನು ನೋಡಿತ್ತ ಕುಳಿತುಕೊಳ್ಳಿ. ನಿರಂತರವೂ ಸಲೀಲವಾಗಿ ಹರಿಯುತ್ತ ಸಾಗಿರುವ – ತಾನು ಸಾಗುವ ದಾರಿಗಳಲ್ಲಿಯ ಕಲ್ಮಷವನ್ನು ಹೊತ್ತುಕೊಂಡು ಅದನ್ನು ಸಂಸ್ಕರಿಸುತ್ತ ಸಾಗಿರುವ ನದಿಗಳನ್ನು ಸುಮ್ಮನೆ ಒಮ್ಮೆ ನೋಡಿ. ಮುಗಿಲೆತ್ತರಕ್ಕೆ ಚಾಚಿ ಮುತ್ತಿಡುವಂತೆ ಕಾತರವಾಗಿರುವ ಗುಡ್ಡಬೆಟ್ಟಗಳು . ತಣ್ಣನೆಯ ಗಾಳಿ, ಮಳೆಯ ದಿನಗಳಲ್ಲಿಯ ಮಳೆಯ ಆರ್ಭಟ. ಗುಡುಗು – ಮಿಂಚುಗಳೆಲ್ಲ ನಿಮ್ಮಲ್ಲಿ ಹೊಸ ಚೈತನ್ಯವನ್ನು ಹುಟ್ಟುಹಾಕುತ್ತವೆ. ನಿಮ್ಮ ಬದುಕಿನ ಪುಟಗಳಲ್ಲಿ ನವಿರು ಪ್ರೀತಿಯ ಪರಿಮಳವನ್ನು ಬೀರುತ್ತವೆ.

ಒಮ್ಮೆ ಧಾರಾಕಾರವಾಗಿ, ಮತ್ತೊಮ್ಮೆ ಹನಿಹನಿಯಾಗಿ ಸುರಿಯುವ ಮಳೆ ಇಳೆಗೆ ಬೀಳುತ್ತಲೆ ಅದು ಉಂಟುಮಾಡುವ ಮಣ್ಣಿನ ಘಮಘಮ ವಾಸನೆ ನಿಮ್ಮಗೆ ಮೂಗಿಗೆ ತಾಗುವ ಸ್ಪರ್ಶಜ್ಞಾನ ನಿಮ್ಮಲ್ಲಿ ಉಂಟುಮಾಡಿಕೊಳ್ಳಿ. ಆಗ ಈ ನೆಲ – ಮುಗಿಲು – ಮಳೆ – ಇಳೆ ಎಲ್ಲವೂ ಚೈತನ್ಯದ ಬುಗ್ಗೆಗಳಾಗಿ ಗೋಚರಗೊಳ್ಳುತ್ತವೆ. ಇದರ ಜೊತೆ ಜೊತೆಗೆ ನಿಮ್ಮ ಬದುಕು ಕೂಡ ಹೊಸ ಹೊಸ ಅರ್ಥಗಳನ್ನು ಸ್ಫುರಿಸತೊಡಗುತ್ತದೆ. ಜೀವನವನ್ನು ಪ್ರೀತಿಸುವ ಪ್ರೀತಿ ನಿಮ್ಮಲ್ಲಿ ಹುಟ್ಟಿಕೊಳ್ಳುತ್ತದೆ.

ಆಗ ನಿಮ್ಮ ಸುತ್ತ ಮುತ್ತಲಿರುವ ವ್ಯಕ್ತಿ ಸಂಗತಿಗಳು, ಸಂಬಂಧಗಳು ಅರ್ಥಪೂರ್ಣವಾಗಿ ಬದುಕಿಗೆ ಚೈತನ್ಯವನ್ನು ನೀಡತೊಡಗುತ್ತವೆ.

ಕೆಲಸಕ್ಕೆ ಬಾರದ ಒಣ ವೇದಾಂತ ನಿಮ್ಮ ಬದುಕಿನಿಂದ ಪಲಾಯನ ಮಾಡುತ್ತದೆ. ಪ್ರೀತಿ ಚಿಗುರುತ್ತದೆ.

ಒಮ್ಮೆ ಧಾರಾಕಾರವಾಗಿ, ಮತ್ತೊಮ್ಮೆ ಹನಿಹನಿಯಾಗಿ ಸುರಿಯುವ ಮಳೆ ಇಳೆಗೆ ಬೀಳುತ್ತಲೆ ಅದು ಉಂಟುಮಾಡುವ ಮಣ್ಣಿನ ಘಮಘಮ ವಾಸನೆ ನಿಮ್ಮ ಮೂಗಿಗೆ ತಾಗುವ ಸ್ಪರ್ಶಜ್ಞಾನ ನಿಮ್ಮಲ್ಲಿ ಉಂಟುಮಾಡಿಕೊಳ್ಳಿ. ಆಗ ಈ ನೆಲ – ಮುಗಿಲು – ಮಳೆ – ಇಳೆ ಎಲ್ಲವೂ ಚೈತನ್ಯದ ಬುಗ್ಗೆಗಳಾಗಿ ಗೋಚರಗೊಳ್ಳುತ್ತವೆ. ಇದರ ಜೊತೆ ಜೊತೆಗೆ ನಿಮ್ಮ ಬದುಕು ಕೂಡ ಹೊಸ ಹೊಸ ಅರ್ಥಗಳನ್ನು ಸ್ಫುರಿಸತೊಡಗುತ್ತದೆ. ಜೀವನವನ್ನು ಪ್ರೀತಿಸುವ ಪ್ರೀತಿ ನಿಮ್ಮಲ್ಲಿ ಹುಟ್ಟಿಕೊಳ್ಳುತ್ತದೆ.

# ಫ್ಯೂಡಲ್ ಗುಣಗಳ ನಾಗಮಾರಪಳ್ಳಿಗೆ ಟಾಂಗುಕೊಡಲಿರುವ ಧರ್ಮಸಿಂಗ್ !



ಪರಿಶಿಷ್ಟ ಜಾತಿಯ ಜನಗಳಿಗೆ ಮೀಸಲು ಕ್ಷೇತ್ರವಾಗಿದ್ದ ಬೀದರ ಲೋಕಸಭಾಕ್ಷೇತ್ರವು ಪುನರ್ ವಿಂಗಡಣೆಯ ನಂತರ ಸಾಮಾನ್ಯ ಕ್ಷೇತ್ರವಾಗಿದೆ. ದಿ.ರಾಮಚಂದ್ರವೀರಪ್ಪನವರ ವೈಯ್ಯಕ್ತಿಕ ವರ್ಚಸ್ಸು ಹಾಗೂ ಆತನ ಸಂಭಾವಿತತನಕ್ಕೆ ಮನಸೋತು ಜನತೆ ಅನಿವಾರ್ಯವಾಗಿ ಈತನನ್ನೆ ಆಯ್ಕೆ ಮಾಡುತ್ತ ಬಂದರು. ಬಿ.ಜೆ.ಪಿ. ಪಕ್ಷದ ವರ್ಚಸ್ಸು ಇಲ್ಲಿ ಯಾವುದೆ ಎಫೆಕ್ಟ್ ಉಂಟುಮಾಡುತ್ತಿರಲಿಲ್ಲ. ಹಿಂದೊಂದು ಸಲ ಭಾವಿ ಪ್ರಧಾನಿ ಎಂದು ಬಿಂಬಿಸಲಾಗುವ ಎಲ್.ಕೆ.ಅಡ್ವಾನಿ ಯಾರದೋ ಮಾತು ಕೇಳಿ ರಾಮಚಂದ್ರವೀರಪ್ಪನಿಗೆ ಟಿಕೇಟ್ ನೀಡದೆ ಸತಾಯಿಸುತ್ತಿದ್ದಾಗ ಸ್ವತಃ ರಾಮಚಂದ್ರವೀರಪ್ಪನೇ ಅಡ್ವಾನಿಯನ್ನು ಸಂಬೋಧಿಸಿ : " ನಮ್ ಕಡೆ ಬಂದು ಸ್ವತಃ ನೀವೇ ನನ್ನೆದುರು ನಿಂತ್ಕೊಳ್ರಿ.... ನಿಮ್ಮನ್ನು ನಾನು ಚುನಾವಣೆಯೊಳಗ ಜಟಕಾಸಿಬಿಡ್ತಾನಿ.... ನೀವ್ ಟಿಕೇಟ್ ಕೊಟ್ರ, ನಿಮ್ಮ್ ಪಾರ್ಟಿ ಕೊಡದಿದ್ರ ಇನ್ನೊಂದು ಪಾರ್ಟಿ.... "ಎಂದು ಝಾಡಿಸಿ ಬಂದಿದ್ದ.

ಅಂದಂತೆ ಬೀದರ ಜಿಲ್ಲೆಯಲ್ಲಿ ಕಮಲ ಅರಳುವ ಯಾವ ಲಕ್ಷಣಗಳೂ ಇರಲಿಲ್ಲ. ಆದರೆ ಭೀಮಣ್ಣಖಂಡ್ರೆ, ಬಸವರಾಜ ಪಾಟೀಲ ಹುಮ್ನಾಬಾದ್ , ಹಾಗೂ ಗುರುಪಾದಪ್ಪ ನಾಗಮಾರಪಳ್ಳಿಯವರ ನಡವಳಿಕೆಗಳು ಜನತೆಗೆ ಹೇಸಿಗೆ ತರಿಸಿದವು. ಭಾಲ್ಕಿ ಹಿರೇಮಠದ ಪೂಜ್ಯ ಚೆನ್ನಬಸವಪಟ್ಟದ್ದೇವರು ಸಂಸ್ಥಾಪಿಸಿದ ಶಾಲಾ, ಕಾಲೇಜುಗಳನ್ನು ಖಂಡ್ರೆ ಹೈಜಾಕ್ ಮಾಡಿಸಿದ್ದರೆ , ಬೀದರ ಜಿಲ್ಲೆಯ ನಾರಂಜ ಸಕ್ಕರೆ ಕಾರ್ಖಾನೆ ಹಾಗೂ ಡಿ.ಸಿ.ಸಿ.ಬ್ಯಾಂಕ್‌ನ್ನು ಸಂಪೂರ್ಣ ಆವರಿಸಿಕೊಂಡಿರುವ ನಾಗಮಾರಪಳ್ಳಿಯ ಫ್ಯೂಡಲ್ ಗುಣಗಳಿಂದ ಬಿ.ಜೆ.ಪಿ ಇಲ್ಲಿ ಚಿಗುರಲು ಆರಂಭಿಸಿತು.



ಯಾವಾಗ ಜನ ಸಂಪೂರ್ಣ ಬಿ.ಜೆ.ಪಿಯ ಕಡೆ ತಿರುಗತೊಡಗಿತೋ ಗುರುಪಾದಪ್ಪ ನಾಗಮಾರಪಳ್ಳಿ ಎಂಬ ಆಧುನಿಕ ರಾಜಕುಮಾರ ತನ್ನ ಡಿ.ಸಿ.ಸಿ.ಬ್ಯಾಂಕ್ ಹಾಗೂ ನಾರಂಜಾ ಕಾರ್ಖಾನೆಗಳಲ್ಲಿ ಮಾಡಿದ ಹಾದರವನ್ನು ಮುಚ್ಚಿಕೊಳ್ಳಲಿಕ್ಕೆ ಬಿ.ಜೆ.ಪಿಗೆ ಜಂಪ್ ಮಾಡಿದ ಕತೆ ಎಲ್ಲರಿಗೂ ಗೊತ್ತಿರುವಂಥದ್ದೆ. ಹಿಂದೊಂದು ಸಂದರ್ಭದಲ್ಲಿ ಮಾಜಿ ಮುಖ್ಯಮಂತ್ರಿ ಧರ್ಮಸಿಂಗ್

ಅವರ ಕೈ- ಕಾಲು ಹಿಡಿದು ತನ್ನ ಸುಪರ್ದಿಯಲ್ಲಿರುವ ಸಂಸ್ಥೆಗಳ ಹಾದವರನ್ನು ಮುಚ್ಚಿಕೊಳ್ಳಲು ರಚ್ಚೆಹಿಡಿದಿದ್ದ.

ತಮಾಷೆಯೆಂದರೆ ಮಾಜಿ ಮುಖ್ಯಮಂತ್ರಿ ಧರ್ಮಸಿಂಗ್ ಅವರೆ ಇದೀಗ ಬೀದರ ಲೋಕಸಭಾಕ್ಷೇತ್ರದ ಕಾಂಗ್ರೆಸ್ ಅಭ್ಯರ್ಥಿಯಾಗಿದ್ದರೆ, ಗುರುಪಾದಪ್ಪ ನಾಗಮಾರಪಳ್ಳಿ ಬಿ.ಜೆ.ಪಿಯ ಅಭ್ಯರ್ಥಿ. ಹಿಂದೆ ಧರ್ಮಸಿಂಗ್ ಅವರಿಗೆ ಡಿ.ಸಿ.ಸಿ.ಬ್ಯಾಂಕ್ ನಲ್ಲಿ ಕಾಣಿಸದೆ ಇದ್ದ ಭ್ರಷ್ಟಾಚಾರ, ನಾರಂಜಾ ಷುಗರ್ ಫ್ಯಾಕ್ಟರಿಗಳಲ್ಲಿ ನಡೆದಿರುವ ಅವ್ಯವಹಾರಗಳು ಇಂದು ಏಕ್ ದಂ ಗೋಚರವಾಗುತ್ತಿವೆ ! ತಾನೆ ಕಾಪಾಡಿದ್ದ ವ್ಯಕ್ತಿ ಇಂದು ತನ್ನೆದುರು ನಿಂತು ಹೆದರಿಸುತ್ತಿದೆ. ಇದನ್ನೆಲ್ಲ ನೋಡಿ ಜನ ನಗಾಡುತ್ತಿದ್ದಾರೆ.

ಆದರೂ ತಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬಂತೆ ನಾಗಮಾರಪಳ್ಳಿಯ ನಸಿಬೂ ಅಷ್ಟು ಚೆನ್ನಾಗಿಲ್ಲವೆಂಬುದು ದಿನಗಳೆದಂತ್ತೆಲ್ಲ ಮನದಟ್ಟಾಗುತ್ತಿದೆ. ಬೀದರ ಸಂಸದೀಯ ಕ್ಷೇತ್ರಕ್ಕೆ ಹೊರಗಿವನವರಂತೆ ಮೇಲ್ನೋಟಕ್ಕೆ ಕಾಣುವ ಧರ್ಮಸಿಂಗ್‌ರ ಬೇರುಗಳು ಬೀದರ ಜಿಲ್ಲೆಯಾದ್ಯಂತ ವಿಸ್ತರಿಸಿಕೊಂಡಿವೆ. ಧರ್ಮಸಿಂಗ್‌ರ ಸರಳ – ಸಜ್ಜನಿಕೆಯ ನಡವಳಿಕೆಗಳು ಅವರಿಗೆ ಬೀದರ ಜಿಲ್ಲೆಯಾದ್ಯಂತ ಸರಿಯಾದ ನೆಟ್‌ವರ್ಕ್ ಉಂಟುಮಾಡಿವೆ. ಇದೆಲ್ಲಕ್ಕಿಂತ ಹೆಚ್ಚಾಗಿ ಗುರುಪಾದಪ್ಪನ ವಿರೋಧಿಗಳೂ ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬೆಳೆದಿದ್ದಾರೆ. ಭಾಲ್ಕಿಯ ಪ್ರಕಾಶ ಖಂಡ್ರೆ ಬಿ.ಜೆ.ಪಿಯವನೇ ಆಗಿದ್ದರೂ ಧರ್ಮಸಿಂಗ್‌ರೊಂದಿಗೆ ಹೊಂದಿದ ಗಳಸ್ಯ – ಕಂಠಸ್ಯ ಸಂಬಂಧ ಪ್ರಾಮಾಣಿಕವಾಗಿ ಪಾರ್ಟಿಗೆ ದುಡಿಯಲು ಅಡ್ಡ ಬರುತ್ತದೆ. ಬಸವಕಲ್ಯಾಣದ ಬಸವರಾಜ ಪಾಟೀಲ ಎಲ್ಲರಿಗೂ ಗೊತ್ತಿರುವಂತೆ ಗುರುಪಾದಪ್ಪನ ಆಜನ್ಮವೈರಿ. ಆಳಂದ ಮತಕ್ಷೇತ್ರವಂತೂ ಜೆ.ಡಿ.ಎಸ್. ತೆಕ್ಕೆಯಲ್ಲಿದೆ. ಅಲ್ಲಿ ಶಾಸಕರಾಗಿ ಆಯ್ಕೆಯಾಗಿರುವ ಸುಭಾಷ ಗುತ್ತೇದಾರ ತಮ್ಮ ಪಕ್ಷದ ಅಭ್ಯರ್ಥಿ ಸುಭಾಷನೇಳಗಿ ಅವರ ಪರವಾಗಿ ಪ್ರಚಾರಮಾಡುವವರು. ಅಲ್ಲದೆ ಇಲ್ಲಿ ಹೆಚ್ಚಿನ ಸಂಖ್ಯೆಯ ಮತದಾರರು ಮುಸ್ಲಿಂ ಸಮುದಾಯದವರು. ಹೀಗಾಗಿ ಸುಭಾಷಗುತ್ತೇದಾರ ಕಮಲವನ್ನು ಅಪ್ಪಿಕೊಂಡು ತನ್ನ ಚರಿಶ್ಮಾಹಾಳು ಮಾಡಿಕೊಳ್ಳವಷ್ಟು ದಡ್ಡರಲ್ಲ. ಔರಾದ ಕ್ಷೇತ್ರದಲ್ಲಿ ಬಿ.ಜೆ.ಪಿಯ ಶಾಸಕನೇ ಇದ್ದರೂ ನಾಗಮಾರಪಳ್ಳಿಯ ಬಾನಗಡಿಗಳ ಗಬ್ಬು ವಾಸನೆ ಇಡೀ ಕ್ಷೇತ್ರದ ತುಂಬೆಲ್ಲ ವ್ಯಾಪಿಸಿ, ತಲೆಬಿಟ್ಟು ಹಿಡಿಸಿದೆ. ಚಿಂಚೋಳಿ ಮತಕ್ಷೇತ್ರದಲ್ಲಿ ಬಿ.ಜೆ.ಪಿಯ ಶಾಸಕ ಸುನೀಲವಲ್ಲಾಪುರೆ ಹಾಗೂ ವೈಜನಾಥಪಾಟೀಲರ ಗುದುಮುರಗಿ ಮತದಾರರ ಮೇಲೆ ನೇರ ಪರಿಣಾಮ ಉಂಟುಮಾಡಲಿವೆ.

ಗುರುಪಾದಪ್ಪನ ರಾಜೀನಾಮೆಯಿಂದ ತೆರವಾದ ಬೀದರ ವಿಧಾನಸಭಾ ಕ್ಷೇತ್ರದ ಚುನಾವಣಾ ಕಣದಲ್ಲಿ ಶಾಸಕ ಬಂಡೆಪ್ಪ ಕಾಶಂಪೂರ ಸಹೋದರ ಮಾರುತಿ ಜೆ.ಡಿ.ಎಸ್. ಅಭ್ಯರ್ಥಿಯಾಗಿದ್ದಾರೆ. ಹೀಗಾಗಿ ಅನಿವಾರ್ಯವಾಗಿ ಹಾಗೂ ಕುಮಾರ ಸ್ವಾಮಿಯ ಮೇಲಿನ ಋಣಕ್ಕಾದರೂ ಬಂಡೆಪ್ಪ ಪಕ್ಷಕ್ಕೆ ದ್ರೋಹಬಗೆದು ಬಿ.ಜೆ.ಪಿಯನ್ನು ತಬ್ಬಿಕೊಳ್ಳುವ ಇರ್ಯಾದೆ ಇಟ್ಟುಕೊಳ್ಳಲಾರ. ಕಳೆದಬಾರಿ ಗುರುಪಾದಪ್ಪನ ವಿರುದ್ಧ ತೀವ್ರ ಸ್ಪರ್ಧೆ ಒಡ್ಡಿದ್ದ ಬಿ.ಎಸ್.ಪಿ.ಯ ಅಭ್ಯರ್ಥಿ ರಹೀಮಾನಖಾನ ಇದೀಗ ಇಲ್ಲಿ ಕಾಂಗ್ರೆಸ್ ಅಭ್ಯರ್ಥಿ. ಸಹಜವಾಗಿಯೆ ವಿಧಾನಸಭೆಯ ಅಭ್ಯರ್ಥಿಗಳು ಪಡೆಯುವ ಮತಗಳ ಪೈಕಿ ಬಹುಪಾಲು ಮತಗಳು ಲೋಕಸಭಾ ಕ್ಷೇತ್ರದ ಅಭ್ಯರ್ಥಿಯೂ ಪಡೆಯುವುದರಿಂದ ನಾಗಮಾರಪಳ್ಳಿಗೆ ಇಲ್ಲಿಯೂ ಹಿನ್ನಡೆ ಉಂಟಾಗಲಿದೆ.



**ತಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬಂತೆ ನಾಗಮಾರಪಳ್ಳಿಯ ನಸಿಬೂ ಅಷ್ಟು ಚೆನ್ನಾಗಿಲ್ಲವೆಂಬುದು ದಿನಗಳೆದಂತ್ತೆಲ್ಲ ಮನದಟ್ಟಾಗುತ್ತಿದೆ. ಬೀದರ ಸಂಸದೀಯ ಕ್ಷೇತ್ರಕ್ಕೆ ಹೊರಗಿವನವರಂತೆ ಮೇಲ್ನೋಟಕ್ಕೆ ಕಾಣುವ ಧರ್ಮಸಿಂಗ್‌ರ ಬೇರುಗಳು ಬೀದರ ಜಿಲ್ಲೆಯಾದ್ಯಂತ ವಿಸ್ತರಿಸಿಕೊಂಡಿವೆ. ಧರ್ಮಸಿಂಗ್‌ರ ಸರಳ – ಸಜ್ಜನಿಕೆಯ ನಡವಳಿಕೆಗಳು ಅವರಿಗೆ ಬೀದರ ಜಿಲ್ಲೆಯಾದ್ಯಂತ ಸರಿಯಾದ ನೆಟ್‌ವರ್ಕ್ ಉಂಟುಮಾಡಿವೆ. ಇದೆಲ್ಲಕ್ಕಿಂತ ಹೆಚ್ಚಾಗಿ ಗುರುಪಾದಪ್ಪನ ವಿರೋಧಿಗಳೂ ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬೆಳೆದಿದ್ದಾರೆ.**

ಇದೆಲ್ಲಕ್ಕಿಂತ ಹೆಚ್ಚಾಗಿ ಬಿ.ಜೆ.ಪಿಯ ಮೂಲ ಸಂಘಟಕ ನಾಂಯಕರೆ ಗುರುಪಾದಪ್ಪ ನಾಗಮಾರಪಳ್ಳಿಯನ್ನು ಹೊರಗಿನವರಂತೆ ನೋಡುತ್ತಿದ್ದಾರೆ. ಪಕ್ಷಕ್ಕಾಗಿ ದುಡಿದವರನ್ನೇ ಮೂಲೆಗುಂಪು ಮಾಡುತ್ತ, ನಿನ್ನೆ ಮೊನ್ನೆ ಪಾರ್ಟಿಗೆ ಬಂದು ಸೇರಿದವರಿಗೆ ಮಣೆಹಾಕುತ್ತಿರುವ ಪಕ್ಷದ ವರಿಷ್ಠರ ಬಗೆಗೆ ಚೆಡ್ಡಿಗಳಲ್ಲಿ ದ್ವಂದ್ವಗಳಿವೆ. ಸರಳನಲ್ಲದ , ಶೋಕಿಲಾಲನಾಗಿರುವ , ತನ್ನ ಕುಟುಂಬದ ಪಾರುಪತ್ಯದಲ್ಲೆ ಇಟ್ಟುಕೊಂಡಿರುವ ಡಿ.ಸಿ.ಸಿ.ಬ್ಯಾಂಕ್, ನಾರಂಜಾ ಕಾರ್ಖಾನೆಗಳ ಹೊಲಸು ರಾಡಿ ನೀರೆಲ್ಲ ಗುರುಪಾದಪ್ಪನ ಅಸಲಿ ಮುಖ ಗೋಚರಗೊಳ್ಳುವಂತೆ ಮಾಡುತ್ತಿವೆ. ಅಲ್ಲದೆ ಈ ಮತಕ್ಷೇತ್ರದಲ್ಲಿ ಒಟ್ಟು ೧೪.೬೪ ಲಕ್ಷ ಮತದಾರರಿರುವ ಈ ಕ್ಷೇತ್ರದಲ್ಲಿ ಶೇಕಡಾ ೫೦.೫೪ ರಷ್ಟು ಪರಿಶಿಷ್ಟ ಜಾತಿ – ಪರಿಶಿಷ್ಟ ಪಂಗಡ ಮತ್ತು ಮುಸ್ಲಿಂ ಮತದಾರರಿದ್ದಾರೆ. ಲಿಂಗಾಯತರು ಹಾಗೂ ಮರಾಠ ಮತದಾರರ ಸಂಖ್ಯೆ ಸಮ ಸಮ ಎನ್ನುವಂತ್ತಿದೆಯಾದರೂ ಅಲ್ಪಸಂಖ್ಯಾತರ ಹಾಗೂ ಪರಿಶಿಷ್ಟ ಜಾತಿಯ ಮತಗಳೇ ನಿರ್ಣಾಯಕ ಎನ್ನುವ ಮಾತು ಕೇಳಿಬರುತ್ತಲಿದೆ.

ಇದೆಲ್ಲರಿಂದಾಗಿ ಧರ್ಮಸಿಂಗ್ ಇಲ್ಲಿ ಧರ್ಮಬೀರುವಾಗಿ ಗೋಚರನಾಗಿ ಆಯ್ಕೆಯಾದರೆ ಯಾರೂ ಅಚ್ಚರಿಪಡಬೇಕಾಗಿಲ್ಲ.



# ಕವಡೆ ಕಾಯಿ

## ಲಂಕೇಶ್ ರ ಹೆಸರುಕೇಳುತ್ತಲೆ ನಾಚುವುದ್ಯಾಕೆ ?

ದರ್ಶನಾಪುರ ಶರಣಬಸ್ಸಪ್ಪ ಶಾಸಕನೋ? ಪುರಸಭೆಯ ಅಧ್ಯಕ್ಷನೋ ?
ನನಗೂ ಕನಫ್ಯೂಶನ್ ಆಗ್ತಾ ಇದೆ, ಪುರಸಭೆಯವರನ್ನು ಕೇಳಿ ಖಾತ್ರಿ ಮಾಡ್ಕೊತೀನಿ.

೦ ನಾಗರತ್ನ ಎಸ್. ಸುರಪುರ

ನಮ್ಮೂರ ದೊರೆಗಳು ಅಸಲಿ ದೊರೆಗಳು ಅಲ್ಲವಂತ್ರಲ್ರೀ.... ?
ಗಂಡ ಸತ್ತ ಮೇಲೆ ಹೆಂಡ್ತಿ ಶ್ಯಾಣಾ ಆದ್ಲು ಅಂದ್ಹಗಾತು........

೦ ವೀಣಾಕುಲ್ಕರ್ಣಿ ರಾಯಚೂರು

ಲಂಕೇಶ್ ಇಲ್ಲದಿರುವ ಈ ದಿನಗಳಲ್ಲೂ ಆತನ ಹೆಸರು ಕೇಳುತ್ತಲೆ ಇಲ್ಲಿನ ಬರಹಗಾರ್ತಿಯೊಬ್ಬಳು ನಸುನಾಚಲು ಕಾರಣವೇನು ?
ಅವರು ಕೊಟ್ಟ ಒಡವೆ ವಸ್ತು, ಅವಗೆ ಮತ್ತು ಈಕೆಗೆ ಗೊತ್ತಿರುವುದರಿಂದ !

೦ ಪ್ರಭು ರಾಚರಡ್ಡಿ ಶಹಾಪುರ

ಈಗೀಗ ಕರ್ನಾಟಕದ ರಾಜಕಾರಣಿಗಳೂ ಕೈ ಕತ್ತರಿಸುತ್ತೇವೆ, ಕುತ್ತಿಗೆ ಕತ್ತರಿಸುತ್ತೇನೆ ಎಂದೆಲ್ಲ ಅಬ್ಬರಿಸುತ್ತಿರಲು ಕಾರಣ ?
ಕರ್ನಾಟಕದ ರಾಜಕಾರಣಿಗಳೂ ಚಂಬಲ್ ಕಣಿವೆ ಢಕಾಯಿತರಂತಾಗುತ್ತಿರುವುದರ ಮುನ್ಸೂಚನೆ....

೦ ಗುರುಶಾಂತಪ್ಪ ಬೀದರ

ನಮ್ಮ ನಾಗಮಾರಪಳ್ಳಿಗೆ ವಿಮಾನ ನಿಲ್ದಾಣ ಮಾಡುವ ಹುಚ್ಚೇಕೆ ?
ಚುನಾವಣೆಯಲ್ಲಿ ಲಾಗ ಹೊಡೆದು ವಿಮಾನದಲ್ಲಿ ಹಾರುವ ಆಸೆ ?!

೦ ಚಂದ್ರಕಾಂತ ಕಾಂತಣ್ಣವರ್ ಗುಲ್ಬರ್ಗಾ

ಖರ್ಗೆಯ ಮುಖ ಇತ್ತೀಚೆಗೆ ತೀರಾ ಕಪ್ಪಿಟ್ಟುಕೊಳ್ಳುತ್ತಿದೆಯಲ್ಲ ?
ಹೊಗಲಾರದವರಿಗೆ ಹೊಗೆ ಇಟ್ಟು ದಿಲ್ಲಿಗೆ ಕಳಿಸುತ್ತಿದ್ದರೆ ಇನ್ನೇನಾಗುತ್ತದೆ ?

೦ ಬಸವರಾಜ ಕೋರವಾರ ಶಹಾಪುರ

ಬಂ ಬೊಂಬಾಟ, ಯಡ್ಡಿಯ ಎದುರು ಕಡಿಮೆಯಾಗಲೂ ಕಾರಣ ?
ಯಡ್ಡಿ ಎಷ್ಟಾದರೂ ದಾರದವರ ಸಂಗ ಮಾಡಿ ತನ್ನ ಜುಟ್ಟು ಅವರ ಕೈಯಲ್ಲಿಟ್ಟ ಕೈಗೊಂಬೆಯಲ್ಲವೆ ?

೦ ಗೋಪಾಲ ಎಸ್. ಶಹಾಪುರ




ಕೃಪೆ : ಮಯೂರ

ಬಾಲ್ಯದಿಂದಲೂ ಪಂಡಿತ್ ಭೀಮಸೇನ್ ಜೋಷಿ ಅವರ ಆರಾಧಕಿಯಾದ ನಾನು ರೇಡಿಯೋ ಗ್ರಾಮಾಫೋನ್ ಗಳಲ್ಲಿ ಅವರ ಹಾಡು , ಸಂಗೀತ ಕೇಳುತ್ತಿದ್ದೆ. ನನ್ನ ತಂದೆ ಸಂಗೀತ ಪ್ರೇಮಿ. ತಾವು ವರ್ಗವಾಗುತ್ತಿದ್ದ ತಾಲ್ಲೂಕು ಪಟ್ಟಣಗಳಲ್ಲಿ ಹೆಣ್ಣು ಮಕ್ಕಳಿಗೆ ಸ್ಕೂಲಿಗಿಂತ ಮೊದಲು ಸಂಗೀತ ಗುರುಗಳನ್ನು ಹುಡುಕುತ್ತಿದ್ದರು. ಆದರೆ ಹಿಂದೂಸ್ತಾನಿ ಸಂಗೀತ ಗುರುಗಳು ದೊರೆಯಲಿಲ್ಲ. ಹಾಗಾಗಿ ನನ್ನ ನಲವತ್ತನೇ ವಯಸ್ಸಿನವರೆಗೆ ನಾನು ಭೀಮಸೇನರಿಂದ ಸಂಗತೀತ ಕಲಿತದ್ದು ಏಕಲವ್ಯ, ದ್ರೋಣಾಚಾರ್ಯರಂತಹ ಸಂಬಂಧದಲ್ಲಿ.

ಗುರುಗಳ ಭೇಟ ನನಗಾದದ್ದು ೧೯೮೮ ರಲ್ಲಿ ಬೆಳಗಾವಿಯ ವಿಜಯ ವಿಠ್ಠಲದೇವಾಲಯದಲ್ಲಿ. ನನ್ನ ಭಕ್ತಿಗೀತೆಗಳ ಪುಸ್ತಕವನ್ನು ದೇವಾಲಯದ ಸಮಿತಿಯವರು ಪಂಡಿತ್ ಭೀಮಸೇನ ಜೋಷಿಯವರಿಂದ ಬಿಡುಗಡೆ ಮಾಡಿಸಿದರು. ಆ ಮಸ್ತಕ ಅವರಿಗೇ ಸಮರ್ಪಿತವಾಗಿದ್ದು, ಅವರ ಬಗ್ಗೆ ರಚಿಸಿದ ಗೀತೆಯೊಂದನ್ನು ನಾನು ಓದಿದಾಗ ನನ್ನ ಆರಾಧ್ಯದೈವ ಭೀಮಸೇನರು ನನಗೆ ಮೆಚ್ಚುಗೆಯ ಅನುಗ್ರಹ ನೀಡಿದರು. ಅಲ್ಲಿಂದ ಮುಂದೆ ನನ್ನ ಅವರ ನಡುವೆ ಅವರ ತಮ್ಮ ನಾರಾಯಣ ಜೋಷಿ ಮತ್ತು ಅವರ ಪತ್ನಿ ಅರುಂಧತಿ ಜೋಷಿ ಕೊಂಡಿಯಂತಿದ್ದಾರೆ. ಈ ಸುಸಂಸ್ಕೃತ ದಂಪತಿಗಳು ಬೆಂಗಳೂರಿನ ಮಾಮರಕ್ಕೂ ಪುಣೆಯ ಕೋಗಿಲೆಗೂ ನಡುವೆ ಸೇತುಬಂಧವಾದರು.

ಅಣ್ಣನ ಜೀವನದ ಘಟನೆಗಳನ್ನು ತಮ್ಮನಿಂದಲೇ ಕೇಳುವ ಸೌಭಾಗ್ಯ ನನ್ನದಾಯಿತು. ನಾರಾಯಣ ಜೋಷಿಯವರು ಹೇಳಿದ ಪ್ರಕಾರ ಭೀಮಣ್ಣ ಹುಟ್ಟಿದ್ದು ಫೆಬ್ರುವರಿ ೪ ರಂದು. ತಿಥಿಯ ಪ್ರಕಾರ ರಥಸಪ್ತಮಿಯಂದು. ಆದಕ್ಕ ರಥಸಪ್ತಮಿಯ ಕುದುರೆಯಂತೆ ಕಾರು ಓಡಿಸುತ್ತಾನೆ.

# ಮರೆಯದ ವ್ಯಕ್ತಿ

ನಮ್ಮ ಮನೆಯಲ್ಲಿ ತುಂಟ ದನವೊಂದಿತ್ತು. ಯಾರು ಹಾಲು ಕರೆದರೂ ಒದೆಯುತ್ತತ್ತು. ಭೀಮಣ್ಣ ಹಾಡಲು ಶುರು ಮಾಡಿದರೆ ಸುಮ್ಮನೆ ನಿಂತು ಹಾಲು ಕರೆಸಿಕೊಳ್ಳುತ್ತಿತ್ತು. ಜೊತೆಗೆ ಹೆಚ್ಚು ಹಾಲು ಕೊಡುತ್ತಿತ್ತು. ತಂದೆಯವರು ಭೀಮಣ್ಣನನ್ನು ಛೇಡಿಸಿ, ಹಸು ಹಾಲು ಕರೆದ ಹಾಗಲ್ಲ. ನೀನು ಹಾಡಿ ನನ್ನ ಕಣ್ಣಲ್ಲಿ ನೀರು ತರಿಸಿದರೆ ನಿಜವಾದ ಸಂಗೀತಗಾರನಾಗುತ್ತೀಯೆ ಎಂದು ಪಂಥ ಕಟ್ಟಿದಾಗ ಹತ್ತು ವರ್ಷದ ಭೀಮಣ್ಣ ಹಾಡಿದ್ದೂ ಆಯ್ತು. ಅವರ ಕಣ್ಣುಗಳಿಂದ ಧಾರಾಕಾರವಾಗಿ ಗಂಗೆ ಯಮುನೆಯರು ಹರಿದು ಭೀಮಣ್ಣನ ನೆತ್ತಿಯನ್ನು ತೋಯಿಸಿದ್ದೂ ಆಯಿತು. ಮಗನನ್ನು ಬಿಗಿದಪ್ಪಿದ ತಂದೆ ಆಶೀರ್ವದಿಸಿ ಸಂಗೀತ ಯಾತ್ರೆಗೆ ಸಜ್ಜುಗೊಳಿಸಿದರು. ಅವರು ಗುರುವನ್ನು ಹುಡುಕುವವರೆಗೆ ಕಾಯಲಾರದ ಭೀಮಣ್ಣ ಮನೆಯನ್ನು ಬಿಟ್ಟು ಓಡಿಹೋದ. ಸಂಗೀತದಾಹ ಅಷ್ಟಿತ್ತು. ಜೋಷಿಯವರ ನೆರವಿನಿಂದ ಪಂಡಿತ್ ಭೀಮಸೇನಜೀಯವರೊಡನೆ ನನ್ನ ಸಂಬಂಧ. ಅವರ ಕುಟುಂಬದವರೊಡನೆ ಆತ್ಮೀಯತೆ ಬೆಳೆಯಿತು. ನನಗವರು ಭೀಮಣ್ಣನಾದರು.

ಬೆಂಗಳೂರಿನಲ್ಲೊಂದು ಸಂಗೀತ ಶಾಲೆ ತೆರೆಯಲು ಯೋಚಿಸಿದೆ. ಶಾಲೆಗೆ ಏನು ಹೆಸರಿಡಬೇಕೆಂದು ಯೋಚಿಸಿದಾಗ ನನಗೆ ಮಿಂಚಿನಂತೆ ಹೊಳೆದದ್ದು ಭೀಮಭೈರವಿ .ಗುರುಗಳ ಹೆಸರಿನೊಂದಿಗೆ ಅವರ ಇಚ್ಛೆಯಂತೆ ಸರ್ವಧರ್ಮ, ಸರ್ವ ಮತದ ಸರ್ವರೂ ಈ ಶಾಲೆಯಿಂದ ಉಪಯೋಗ ಪಡೆಯಬೇಕೆಂಬ ಇಚ್ಛೆಗನುಗುಣವಾಗಿ ಭೈರವಿ ರಾಗದ ಹೆಸರನ್ನು ಸೇರಸಲಾಯಿತು.ಭೈರವಿ ಒಂದು ಮುಕ್ತರಾಗ. ಅದನ್ನು ದಿನವಿಡೀ ಯಾವ ಕಾಲದಲ್ಲಿ ಬೇಕಾದರೂ ಹಾಡಬಹುದು. ಕಾಲ ದೇಶ ರೀತಿ ನೀತಿಯ ಕಟ್ಟಳೆಗಳಿಲ್ಲದ ಭೈರವಿ ಆದಿಶಕ್ತಿಯ ಹೆಸರೂ ಸಹ.

ಭೀಮಸೇನರ ಮಿಲೇ ಸುರ್ ಮೇರಾ ತುಮ್ಹಾರಾ ರಾಷ್ಟ್ರಗೀತೆಯನ್ನು ಭೈರವಿ ರಾಗಕ್ಕೆ ಅಳವಡಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಗುರೂಜಿಯವರು ಅಂದು ತಮ್ಮ ಕುಟುಂಬ ಸಮೇತ ಬೆಂಗಳೂರಿಗೆ ಬಂದು ನನ್ನ ಶಾಲೆಯನ್ನು ಉದ್ಘಾಟಿಸಿದರು. ಅದೇ ವರ್ಷ ನಾನು ಮನೋರೋಗತಜ್ಞಳಾಗಿ ಪದವಿ ಪಡೆದೆ. ಭೀಮಸೇನರ ಬಾಲ್ಯದ ಘಟನೆಗಳಿಂದ ಹಾಗೂ ವಿಜ್ಞಾನಿ ಜಗದೀಶ್ ಚಂದ್ರಬೋಸ್ರವರ ಪ್ರಯೋಗಗಳಿಂದ ಪ್ರೇರಿತಳಾಗಿ ಜೀವಿಗಳ ಮನಸ್ಸಿನ ಮೇಲೆ ಸಂಗೀತದ ಪ್ರಭಾವ ಎಂಬ ವಿಷಯದ ಬಗ್ಗೆ ಸಂಶೋಧನೆ ಆರಂಭಿಸಿದೆ. ನನಗೆ ಮಾರ್ಗದರ್ಶಿಯಾಗಲು ಗುರೂಜಿ ಒಪ್ಪಂದ ಪತ್ರಕ್ಕೆ ಸಹಿಹಾಕಿ ಸಮ್ಮತಿಸಿದರು. ಅಲ್ಲಿಂದ ಮುಂದೆ ಅವ್ಯಾಹತವಾಗಿ ಪುಣೆಯ ಅವರ ನಿವಾಸಕ್ಕೆ ಭೇಟಿ ಸಂಗೀತದ ಬಗ್ಗೆ ಸಂವಾದ ವಿಚಾರ ವಿನಿಮಯ ಮುಂದುವರೆದಿದೆ. ಅವರ ಕುಟುಂಬದವರಲ್ಲಿ ಒಬ್ಬ ಸದಸ್ಯಳಂತಿರುವ ನಾನು ಇದು ನನ್ನ ಪೂರ್ವಜನ್ಮದ ಸುಕೃತವೆಂದು ಭಾವಿಸಿದ್ದೇನೆ. ಈಗತಾನೇ ಹಿಂದೂಸ್ತಾನಿ ಸಂಗೀತಕ್ಕೆ ಪದಾರ್ಪಣೆ ಮಾಡಿರುವ ನನ್ನ ಮೊಮ್ಮಗಳು ಶ್ರೇಯಾಳನ್ನು ಆಶೀರ್ವದಿಸಿ ಸಂಗೀತ ಕಲಿತು ನನ್ನಂತೆ ಸಂಗೀತದ ಆರಾಧಕಳಾಗು ಎಂದು ಹರಸಿದಾಗ ನನ್ನ ಈ ಜನ್ಮ ಸಾರ್ಥಕ ಎನಿಸಿತು.

ಭಾರತ ರತ್ನ ಭೀಮಣ್ಣನವರ ಬಗ್ಗೆ ಸಹೋದರ ಜೋಷಿಯವರು ಹೇಳುವಂತೆ : He is not Sainty ; He is Godly. ಅವರು ಭಾರತ ರತ್ನ ಮಾತ್ರವಲ್ಲ ; ಮಾನವ ರತ್ನವೂ ಹೌದು.

o ಬಿ.ಎನ್. ಮಂಜುಳಾದೇವಿ
ಬೆಂಗಳೂರು

# ರಾಯಚೂರು ಮತಕ್ಷೇತ್ರದ ತುಂಬ ಗಣಿಧಣಿಗಳ ದರ್ಭಾರ !



ಇದುವರೆಗೆ ಬಳ್ಳಾರಿ ಹಾಗೂ ಅದರ ಆಸುಪಾಸಿನಲ್ಲಿ ಮಾತ್ರ ಠೇಂಕರಿಸುತ್ತ ದುಡ್ಡಿನ ಅಮಲಿನಲ್ಲಿ ಮದೋನ್ಮಥವಾಗಿ ತಿರುಗಾಡುತ್ತಿದ್ದ ರೆಡ್ಡಿ - ರಾಮುಲು ಎಂಬ ಮದ-ಗಜಗಳು ಇದೀಗ ಉತ್ತರ ಕರ್ನಾಟಕದ ರಾಯಚೂರು ಮತಕ್ಷೇತ್ರಕ್ಕೂ ಕಾಲಿಟ್ಟಿವೆ. ಇದರಿಂದ ಸಹಜವಾಗಿಯೆ ಎಲ್ಲೆಲ್ಲೂ ಹಣ - ಹೆಂಡದ ಹುಚ್ಚು ಹೊಳೆ ಹರಿಯುತ್ತಿದೆ. ಇತ್ತೀಚಿನ ದೇವದುರ್ಗ ಮತಕ್ಷೇತ್ರದ ಜೆ.ಡಿ.ಎಸ್. ಅಭ್ಯರ್ಥಿಯಿಂದ ರಾಜೀನಾಮೆ ಕೊಡಿಸಿ ಆತನನ್ನು ಮಂತ್ರಿಮಾಡಿಯೇ ಮತ್ತೆ ಬಿಜೆಪಿಯಿಂದ ಗೆಲ್ಲಿಸಿದ ಹುಮ್ಮಸಿನಲ್ಲಿರುವ ಗಣಿದಣಿಗಳು ಇಡೀ ಉತ್ತರ ಕರ್ನಾಟಕ ಪ್ರದೇಶವನ್ನು ತಮ್ಮ ಕಬ್ಜಾದಲ್ಲಿಟ್ಟುಕೊಂಡು ರಾಜಭಾರ ಮಾಡಬೇಕೆಂಬ ಹುನ್ನಾರದ ಸ್ಪಷ್ಟ ಸೂಚನೆ ದೊರಕುತ್ತಿವೆ. ಈ ಎಲ್ಲಾ ಕಾರಣಗಳಿಂದಾಗಿ ತಾವು ಯಾರನ್ನು ಸೂಚಿಸುತ್ತೇವೋ ಆತ ಏನ ಕೇನ ಪ್ರಕಾರೇಣ ಗೆದ್ದು ಬರಲೇ ಬೇಕು ಎಂಬ ಧಾವಂತದಲ್ಲಿದ್ದಾನೆ.

ಇದರಿಂದಾಗಿಯೆ ಬಹಳಷ್ಟು ದಿನಗಳ ಹಿಂದೆಯೆ ಬಿಜೆಪಿ ಚುನಾವಣಾ ಅಭ್ಯರ್ಥಿಯೆಂದು ಪ್ರಕಟಿಸಿದ್ದ ರಾಜಾ ಅಮರೇಶನಾಯಕನಿಗೆ ಟಾಂಗುಕೊಟ್ಟು ಯಾರಿಗೂ ಪರಿಚಯವಿರದ , ಒಮ್ಮೆಯೂ ಈ ಭಾಗದತ್ತ ತಿರುಗಾಡಿಯೂ ನೋಡದೆ ಇರುವ , ರಾಮುಲುವಿನ ರಕ್ತ ಸಂಬಂಧಿ ಎಸ್.ಫಕೀರಪ್ಪ ವಕ್ಕರಿಸಿದ್ದಾನೆ. ಹಿಂದೆ ಸಚಿವ ಶಿವನಗೌಡನಿಗೆ ಮಾತುಕೊಟ್ಟು ದೇವದುರ್ಗದಿಂದ ಮತ್ತೆ ಗೆಲ್ಲಿಸಿ ತಂದಂತೆ ಅಸಮಧಾನಗೊಂಡಿರುವ ಅಮರೇಶನಾಯಕನಿಗೂ ಮುಂದಿನ ದಿನಗಳಲ್ಲಿ ಸೂಕ್ತ ಸ್ಥಾನಮಾನ ನೀಡುವುದಾಗಿ ರಮಿಸತೊಡಗಿದ್ದಾನೆ , ರಾಮುಲು. ತಾನು ಹೋದಲ್ಲಿ ಬಂದಲೆಲ್ಲ ನಾನು ನಿಮ್ಮನ್ನೇ ನಂಬಿ ನನ್ನ ಸಹೋದರರನ್ನು ನಿಮ್ಮ ಮಧ್ಯೆ ಚುನಾವಣೆಗೆ ನಿಲ್ಲಿಸಿದ್ದೇನೆ. ಅವರನ್ನು ಆಶೀರ್ವದಿಸಿ. ನಾನು ಮತ್ತು ನನ್ನ ಸಹೋದರ ಸಣ್ಣ ಫಕೀರಪ್ಪ ಇಬ್ಬರೂ ನಮ್ಮ ಕೊನೆಯ ಉಸಿರು ಇರುವವರೆಗೂ ನಿಮ್ಮ ಸೇವೆ ಮಾಡುತ್ತೇವೆ. ನಾನೇನು ಹುಟ್ಟಾ ಶ್ರೀಮಂತನಲ್ಲ.ಆದರೆ ದೇವರು ಇಂದು ನನಗೆ ಸಾಕಷ್ಟು ಶ್ರೀಮಂತಿಕೆಯನ್ನು ಕೊಟ್ಟಿದ್ದಾನೆ. ಆದಕಾರಣ ನಾನು ಬಡವರಲ್ಲಿ ಆ ದೇವರನ್ನು ಕಾಣುತ್ತೇನೆ. ದೇವರು ನೀಡಿದ ಕಾಣಿಕೆಯನ್ನು ಆತನಿಗೆ ಅಂದರೆ ಬಡವರಿಗೇ ನೀಡುತ್ತಿದ್ದೇನೆ ಎಂದು ಪಕ್ಕಾ ಸಿನೆಮಾ ಡೈಲಾಗ್ ಬೇರೆ ಹೊಡೆಯುತ್ತಾನೆ.

ಲಿಂಗಸೂಗೂರು, ಶಹಾಪುರ, ಸುರಪುರ, ಯಾದಗಿರ , ದೇವದುರ್ಗ, ರಾಯಚೂರು, ರಾಯಚೂರು(ಗ್ರಾಮೀಣ) ಹಾಗೂ ಮಾನ್ವಿ ಮತಕ್ಷೇತ್ರಗಳನೊಳಗೊಂಡ ರಾಯಚೂರು ಸಂಸದೀಯ ಮತಕ್ಷೇತ್ರ ೮ ಕ್ಷೇತ್ರಗಳಲ್ಲಿ ೪ ಕ್ಷೇತ್ರಗಳಲ್ಲೂ ಕಾಂಗ್ರೆಸ್‌ನದ್ದೆ ದರ್ಬಾರು. ಸುರಪುರ ಹಾಗೂ ಲಿಂಗಸೂಗೂರು ಮಾತ್ರ ಬಿ.ಜೆ.ಪಿ.ಗಳ ಪಾಲಾಗಿದೆ. ಮೇಲುನೋಟಕ್ಕೆ ಕಾಂಗ್ರೆಸ್‌ನದ್ದೆ ಕಾರುಬಾರು

ಅನಿಸಿದರೂ , ಗಣಿಧಣಿಗಳ ಆರ್ಭಟ ಹೆಚ್ಚಾಗತೊಡಗಿದೆ. ತನಗೆ ಟಿಕೇಟ್ ದೊರಕದೆ ಮುನಿಸಿಕೊಂಡು ಹೋಗಿದ್ದ ರಾಜಾ ಮದನಗೋಪಾಲನಾಯಕನನ್ನು ರಾಜುಗೌಡ ಮತ್ತೆ ಕರೆದುಕೊಂಡಿದ್ದಾನೆ. ಶಿವಣ್ಣ ಮಂಗ್ಯಾಳಗೂ ಗಾಳಹಾಕಿ ಸೆಳೆದಿದ್ದಾನೆ. ಕಟ್ಟಾ ಕಾಂಗ್ರೆ ಆಗಿರುವ ಹಿಂದೆ ಇದೆ ರಾಯಚೂರು ಮತಕ್ಷೇತ್ರವನ್ನು ಪ್ರತಿನಿಧಿಸುತ್ತಿದ್ದ ವೆಂಕಟೇಶನಾಯಕ ಹಾಗೂ ಆತನ ಮಗ ಭಗವಂತನಾಯಕರಿಗೇ ಚಡ್ಡಿ ತೊಡಿಸಬೇಕೆಂಬ ಹುನ್ನಾರ ಈ ಗಣಿಧಣಿಗಳದ್ದು. ಸುರಪುರದ ಶಾಸಕ ಮುಖ್ಯಮಂತ್ರಿಯಡಿಯೂರಿಗೆ ಗಣಿಧಣಿಗಳ ಬಲದಿಂದ ಧಮಕಿಯ ಮಾತುಗಳನ್ನಾಡಿ , ಅಮರೇಶನಾಯಕನನ್ನು ತೆಗೆದು ಆ ಸ್ಥಾನದಲ್ಲಿ ಫಕೀರಪ್ಪನನ್ನು ಕಾಂಡಿಡೇಟ್ ಮಾಡದೆ ಹೋದರೆ ಮುಂದಿನ ಆಗುಹೋಗುಗಳಿಗೆಲ್ಲ ನೀವೇ ಕಾರಣರಾಗಬೇಕಾಗುತ್ತದೆ ಎಂದು ತಿದಿಒತ್ತಿದ್ದಾನೆ. ಹಾಗಾಗಿ ಯಡ್ಡಿ ಅನಿವಾರ್ಯವಾಗಿ ಗಪ್ ಚುಪ್ ಕುಳಿತುಕೊಳ್ಳಬೇಕಾಗಿ ಬಂದಿದೆ.

ಸಾಮಾನ್ಯ ಕ್ಷೇತ್ರವಾಗಿದ್ದ ರಾಯಚೂರು ಸಂಸದೀಯ ಕ್ಷೇತ್ರ ಈಗ ಎಸ್.ಟಿ. ಮೀಸಲು ಕ್ಷೇತ್ರವಾಗಿದೆ. ಆದರೇನಂತೆ ? ಎಸ್.ಟಿ. ಹಾಗೂ ಎಸ್.ಸಿ. ಜನಗಳ ಪ್ರಾಬಲ್ಯವೆ ಹೆಚ್ಚಾಗಿರುವ ಈ ಮತಕ್ಷೇತ್ರದಿಂದ ಹಿಂದೆಯೂ ಎಸ್.ಟಿ. ಜನಾಂಗದವರೆ ಎಂ.ಪಿಯಾಗಿ ಆಳ್ವಿಕೆ ನಡೆಸಿದ್ದರು. ವೆಂಕಟೇಶ್ ನಾಯಕ, ರಾಜಾ ರಂಗಪ್ಪನಾಯಕ, ಅಂಬಣ್ಣನಾಯಕರೇ ಇಲ್ಲಿ ತಮ್ಮ ಚಕ್ರಾಧಿಪತ್ಯ ಸ್ಥಾಪಿಸಲು ಹೆಣಗಾಡಿದವರು. ಒಂದು ಸಲ ಮಾತ್ರ ಎಂ.ವೈ.ಘೋರ್ಪಡೆ ಮಗದೊಂದು ಸಲ ಬಿ.ವಿ.ದೇಸಾಯಿ ಗೆದ್ದು ಬಂದಿದ್ದಾರೆ. ಯಾವತ್ತಿಗೂ ಇಲ್ಲಿ ಎಸ್.ಟಿ. , ಎಸ್.ಸಿ. ಹಾಗೂ ಮುಸ್ಲಿಂ ಹಾಗೂ ಲಿಂಗಾಯತರ ಮತಗಳೆ ನಿರ್ಣಾಯಕ ಎನ್ನುವ ಪರಿಸ್ಥಿತಿ ಇಲ್ಲಿದೆ.

ಕಾಂಗ್ರೆ ಅಭ್ಯರ್ಥಿಯಾಗಿರುವ ಸುರಪುರದ ವೆಂಕಟಪ್ಪನಾಯಕ ಶಾಸಕನಾಗಿ ಆಯ್ಕೆಯಾಗಿ ಸುರಪುರದಲ್ಲಿ ತಾನು ಎಂಥ ದರ್ಭಾರ ನಡೆಸಿದ ಎಂಬುದು ಎಲ್ಲರಿಗೂ ಗೊತ್ತಿರುವ ಬಹಿರಂಗ ಸತ್ಯವಾಗಿದೆ. ತನ್ನ ಅಪ್ಪಣೆಯಿಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗಾಡಬಾರದು ಎಂಬ ಧೋರಣೆಯ ವೆಂಕಟಪ್ಪನಾಯಕ ಮತ್ತು ಅವರ ಸಹೋದರ ರಂಗಪ್ಪನಾಯಕ, ಮೌನೇಶ್ ನಾಯಕ ಮುಂತಾದವರ ಆಟಾಟೋಪ ಮೇರೆ ಮೀರಿತ್ತು. ಅವರ ಪಾಪದ ಕೊಡ ತುಂಬಿದ್ದರೂ ಅದು ತುಳುಕುತ್ತಿದ್ದರೂ ಅದೇಕೋ ಅವರ ದರ್ಭಾರ ಮಾತ್ರ ಹಾಗೇ ನಡೆದಿತ್ತು. ಇದೆಲ್ಲಕ್ಕೂ ಒಂದು ಫುಲ್ ಸ್ಟಾಪ್ ಬಿದ್ದದ್ದೆ ಸುರಪುರದ ಈಗೀನ ಶಾಸಕ ರಾಜುಗೌಡನಿಂದ. ಇಂಥ ದರ್ಪಿಷ್ಟ ನಡವಳಿಕೆಗಳಿಂದ ತಮಗೆ ಕುತ್ತು ಕಾದಿದೆ ಎಂದು ಅರಿತುಕೊಂಡಿರುವ ವೆಂಕಟಪ್ಪನಾಯಕ ಇದೀಗ ಪತ್ರಿಕೆಗಳ ಮೂಲಕ ತನ್ನ ಹೆಸರಿನ ಮುಂದೆ ಇರುವ ರಾಜಾ ನಾನಲ್ಲವೆಂತಲೂ, ಹಾಗೂ ಡಾಕ್ಟರ್ ಕೂಡ ಅಲ್ಲವೆಂತಲೂ ಹೇಳುವ ದೈನೇಸಿ ಸ್ಥಿತಿ ತಲುಪಿದ್ದಾನೆ. ರಾಜಕೀಯದಲ್ಲಿರುವ ನಾವೆಲ್ಲ ಜನಸಾಮಾನ್ಯರ ಸೇವಕರು ಎಂಬ ಅರ್ಥದಲ್ಲಿ ಮಾತಾಡತೊಡಗಿದ್ದಾನೆ. ಮಾನ್ವಿ ಮೂಲದ ದೇವಣ್ಣ ನಾಯಕ ಜೆ.ಡಿ.ಎಸ್. ಅಭ್ಯರ್ಥಿಯಾಗಿದ್ದರೂ ಈತ ಅಟಕ್ಕುಂಟು ಲೆಕ್ಕಕ್ಕಿಲ್ಲ ಎಂಬಂತ್ತಿದ್ದಾನೆ.

# ನೀನಲ್ಲದೆ ನನಗೆ ಮತ್ತಾರೂ ಇಲ್ಲ.....

ಈ ಘಟನೆಯನ್ನು ನರಸಿಂಹಯ್ಯನವರು ನನಗೆ ವಿವರಿಸಿದ್ದರು. ಒಂದು ಸಲ ಅವರು ಯಾರನ್ನೋ ನೋಡಬೇಕೆಂದು ಹೊರಟಿದ್ದರು. ಆಟೋ ರಿಕ್ಷಾ ಸ್ಟ್ಯಾಂಡಿನಲ್ಲಿದ್ದ ಒಂದು ರಿಕ್ಷಾದಲ್ಲಿ ಕುಳಿತು ಇಂಥಲ್ಲಿಗೆ ನಡೆಯಿರಿ ಎಂದು ಹೇಳಿದರು. ಆಟೋ ಡ್ರೈವರಿನ ವೇಶಭೂಷಣ ನೋಡಿ ಅವನು ಉತ್ತರ ಕರ್ನಾಟಕದವನಿರಲು ಸಾಕೆಂದು ಊಹಿಸಿದರಂತೆ.



ನರಸಿಂಹಯ್ಯ : ಏನು ಡ್ರೈವರ್ ಸಾಹೇಬರೇ ನಿಮ್ಮ ಮೂಲ ಯಾವ ಕಡೆ ?

ಡ್ರೈವರ್ : ಸಾರ್ , ನಾನು ವಿಜಾಪುರದವರಿ....

ನರಸಿಂಹಯ್ಯ : ನನಗೆ ಹಾಗೆ ಅನಿಸಿತ್ತು. ನಿಮ್ಮ ವಿಭೂತಿ ಕೊರಳಲ್ಲಿಯ ಲಿಂಗು ನೀವು ವಿಜಾಪುರದವರೇ ಇರಬೇಕು ಎಂದಿದ್ದೆ.

ಡ್ರೈವರ್ : ಸರ್, ನಾವು ಬಸವಣ್ಣನ ಊರಿನ ಕಡೆಯವರು.

ನರಸಿಂಹಯ್ಯ : ಹೌದಪ್ಪಾ ಅವನು ದೊಡ್ಡ ಮಹಾತ್ಮನಪ್ಪ. ಎಂಥ ಸುಧಾರಣೆ ತಂದನು. ಉಳಿದವರಿಗೆ ಅದು ಅಸಾಧ್ಯ. ಬಸವಣ್ಣನ ವಚನಗಳು ತಮಗೆ ಗೊತ್ತಿವಿಯೋ ?

ಡ್ರೈವರ್ : ಬರದ ಏನ್ರಿ, ಎಂದವನೆ ರಾಗ ತೆಗೆದು ಹಾಡಹತ್ತಿದನಂತೆ

ನೀನೆ ತಂದೆ, ನೀನೆ ತಾಯಿ
ನೀನೆ ಬಂಧು , ನೀನೆ ಬಳಗ
ನೀನಲ್ಲದೆ ನನಗೆ ಮತ್ತಾರು ಇಲ್ಲವಯ್ಯ

ಎನ್ನುತ್ತ ತಿರುತಿರುಗಿ ನರಸಿಂಹಯ್ಯವರವನ್ನು ನೋಡುತ್ತ ರಾಗ ಮಾಡುತ್ತ ಆಟೋ ಓಡಿಸಹತ್ತಿದ.



ಈ ತರಹ ಆಟೋ ಚಲಿಸುವುದು ಕಂಡು ನರಸಿಂಹಯ್ಯನವರು ಡ್ರೈವರನಿಗೆ ಹೇಳಿದರು. ಅಯ್ಯಾ... ಮಹಾತ್ಮಾ, ನಾನು ಈಗ ನಿನ್ನ ಆಟೋದಲ್ಲಿ ಕುಳಿತಿರುವೆ ಕಾರಣ ನೀನೆ ನನ್ನ ರಕ್ಷಕ ಸರಿಯಾಗಿ ಮುಂದೆ ನೋಡುತ್ತ ನಡೆಸಯ್ಯಾ ನೀನಿಲ್ಲದೆ ನನಗೆ ಮತ್ತಾರು ಇಲ್ಲವಯ್ಯಾ. ಆಕ್ಸಿಡೆಂಟ್ ಆಗಬಾರದಯ್ಯ.

ಆಟೋದವನಿಗೆ ಇನ್ನೂ ಖುಷಿ. ಅವನು ನರಸಿಂಹಯ್ಯನವರು ರಾಗ ತೆಗೆಯುವುದನ್ನು ಕಂಡು ಮತ್ತೆ ಹಾಡಹತ್ತಿದನಂತೆ. ಈ ಸಲ ಅವನು : ಸಾಹೇಬ್ರ ನಾಳೆ ಬಪ್ಪುದು ನಮಗೆ ಇಂದೇ ಬರಲಿ ಇಂದು ಬಪ್ಪುದು ನಮಗೆ ಈಗಲೇ ಬರಲಿ ಎನ್ನುತ್ತ ಎರಡೂ ಕೈಗಳನ್ನೂ ಆಟೋ ಸ್ಟಿಯರಿಂಗದಿಂದ ಮೇಲೆತ್ತಿದ.

ಮುಂದಿನ ಪುಟಕ್ಕೆ

# ಕೊಲೆಗಡುಕರಿಗಿಂತಲೂ ಸನಾತನವಾದಿಗಳು ಹೆಚ್ಚು ಅಪಾಯಕಾರಿ



೫ ನೇ ಪುಟದಿಂದ

ರಾಜಕಾರಣಿಗಳ ಕರ್ತವ್ಯ. ಆದರೆ ಕೇಳಬೇಕಾದ ಪ್ರಜೆಗಳೆ ತಮ್ಮ ವ್ಯಕ್ತಿತ್ವ ಮರೆತುಬಿಟ್ಟಾಗ ರಾಜಕಾರಣಿಗಳ ಕಣ್ಣಲ್ಲಿ ಆತ ಕೀಳಾಗಿ ಗೋಚರಗೊಳ್ಳುತ್ತಾನೆ. ನಮ್ಮ ಹಕ್ಕುಗಳ ಕುರಿತು ನಾವು ಗೆಲ್ಲಿಸಿದ ರಾಜಕಾರಣಿಗಳಿಗೆ ನಾವುಗಳೆಲ್ಲ ಎಲ್ಲಿಯವರೆಗೆ ಕೇಳುವುದಿಲ್ಲವೋ ? ಅಲ್ಲಿಯವರೆಗೆ ಅವರು ತಮ್ಮ ಕಾಲನ್ನು ನಮ್ಮ ಮೇಲೆ ಹೇರಿ ಪ್ರಜೆಗಳೆ ಪ್ರಭುಗಳಲ್ಲ, ರಾಜಕಾರಣಿಗಳೆ ಈ ದೇಶದ ಅಂದರೆ ಪ್ರಜಾಪ್ರಭುತ್ವದ ದೊರೆಗಳು ಎಂದು ಹೇಳುವವರೆ.

ಮತ್ತೊಂದು ಆತಂಕದ ಸಂಗತಿ ಎಂದರೆ ಲೋಕಸಭೆಯ ಈ ಚುನಾವಣೆಗಳಲ್ಲಿ ಸ್ಪರ್ಧಿಸಿರುವ ಬಹುತೇಕ ಪಕ್ಷಗಳ ರಾಜಕಾರಣಿಗಳ ಪಟ್ಟಿ ನೋಡಿದರೆ ಯಾರಿಗಾದರೂ ಕೊಂಚ ಭಯವಾಗುತ್ತದೆ. ಒಬ್ಬೊಬ್ಬ ರಾಜಕಾರಣಿಯ ಇತಿಹಾಸ,ಭೂಗೋಲ ನೋಡುತ್ತಿದ್ದರೆ ತಲೆ ತಿರುಗಿ ಬೀಳುತ್ತೇವೆ. ಘಟಿಂಗರು, ಕೊಲೆಗಡುಕರು, ದರೋಡೆಖೋರರು, ಜೇಬುಕತ್ತರಿಸುವವರು, ಜೀವತೆಗೆಯುವವರೆ ಚುನಾವಣೆಯಲ್ಲಿ ಸ್ಪರ್ಧಿಸಿದ್ದಾರೆ.

ಇವರೆಲ್ಲರಿಗಿಂತಲೂ ಹೆಚ್ಚು ಅಪಾಯಕಾರಿಯಾದುದೆಂದರೆ ಸಿದ್ಧಾಂತದ ಹೆಸರಿನ ಮೇಲೆ ದೇಶವನ್ನು ಪ್ರಕಾಶಮಾನಗೊಳಿಸುತ್ತೇವೆ ಎಂದು ಹೊರಟಿರುವ ಸನಾತನವಾದಿಗಳು. ದೇಶವನ್ನು ಇಲ್ಲಿಯ ಜನತೆಯನ್ನು ರಕ್ಷಿಸುತ್ತೇವೆ ಎನ್ನುತ್ತಲೆ ಎಲ್ಲವನ್ನು ನುಂಗಿನೊಣೆಯುವವರು. ಭಾರತದ ಅನಕ್ಷರತೆಗೆ, ಮೌಢ್ಯಕ್ಕೆ ಪ್ರಜ್ಞಾಹೀನ ಸ್ಥಿತಿಗೆ ಇವರೆಲ್ಲ ಕಾರಣರು.

ದುರಂತರವೆಂದರೆ ನಾವುಗಳು ಗೊತ್ತಿದ್ದೋ ಗೊತ್ತಿಲ್ಲದೆಯೋ ಇಂಥ ಅವಿವೇಕಿಗಳ ಜೊತೆ ಸೇರಲು ಹೊರಟಿದ್ದೇನೆ. ಇವರೊಂದಿಗೆ ಹೆಜ್ಜೆ ಹಾಕುತ್ತ ಹಾಕುತ್ತ ನಮ್ಮ ಭವಿಷ್ಯ ರೂಪಿಸಿಕೊಳ್ಳಲು ಕಾತರರಾಗಿದ್ದೇವೆ. ನಮ್ಮ ಇಡೀ ವ್ಯಕ್ತಿತ್ವವನ್ನೆ ಹೊಸಕಿಹಾಕಿ, ತಾವು ಹೇಳುತ್ತ ಬಂದ ಸಿದ್ಧಾಂತ , ಧರ್ಮಗಳೆ ಶ್ರೇಷ್ಠ ಎಂದು ವಾದಿಸುವ ಮನುಷ್ಯ ವಿರೋಧಿ ಶಕ್ತಿಗಳ ಜೊತೆಗೆ ನಾವು ಹೊರಟದ್ದು ನಮ್ಮ ಹಳ್ಳವನ್ನು ನಾವೇ ತೋಡಿಕೊಂಡಂತೆಯೆ ಸೈ. ಅಲ್ಲವೆ ?

೦ ವಿಶ್ವಾರಾಧ್ಯ ಸತ್ಯಂಪೇಟೆ

## ನೀನಲ್ಲದೆ ನನಗೆ ಮತ್ತಾರೂ ಇಲ್ಲ.....

ಹಿಂದಿನ ಪುಟದಿಂದ

**ನರಸಿಂಹಯ್ಯ :** ಡ್ರೈವರ ಸಾಹೇಬ್ರೆ ನೀವು ನನ್ನನ್ನು ಕೈಲಾಸದ ಸಮೀಪಕ್ಕೆ ತಂದಿರುವಿರಿ. ಕೈಲಾಸದಲ್ಲಿ ನಾನು ಸೇರಬಯಸುವುದಿಲ್ಲ. ನನ್ನನ್ನು ಇಲ್ಲಿಯೇ ಇಳಿಸಿರಿ. ಇಲ್ಲಿ ನಾನು ಮಾಡಬೇಕಾಗ ಕಾರ್ಯಗಳು ಬಹಳ ಇವೆ ಎಂದರಂತೆ. ರಿಕ್ಷಾ ನಿಂತಿತು. ಇಬ್ಬರೂ ನಗುತ್ತಿದ್ದರು. ನರಸಿಂಪಯ್ಯನವರು ಸೇರಬೇಕಾದ ಮನೆಯೂ ಅಲ್ಲಿಯೇ ಇತ್ತು.

ಆಟೋದವನಿಗೆ ಹಣ ಕೊಟ್ಟು ಮತ್ತೆ ಭೇಟಿಯಾಗೋಣ ಎಂದರಂತೆ. ಆಟೋದವನು ಇವರಿಗೆ ನಮಸ್ಕರಿಸಿ ಇವನಾರವ ಇವನಾರವ ಎನಿಸದಿರಯ್ಯ ಇವ ನಮ್ಮವ ನಮ್ಮವ ಎನಿಸಯ್ಯಾ ಎಂಬ ವಚನ ಹಾಡುತ್ತ ಹೋದನಂತೆ.

೦ ಡಾ. ಎಸ್.ಜಿ.ನಾಗಲೋಟಿಮಠ

# ನಿನ್ನ ನೆನಪಾದಾಗ

- ಎಚ್.ಎಸ್.ಮುಕ್ತಾಯಕ್ಕ

ಕಾಣಲಾಗದ ನಿನ್ನ ನೆನಪಾದಾಗ ನೂರು ನೋವಿನ ತಾನಗಳು
ಮರೆಯಲಾಗದ ನಿನ್ನ ನೆನಪಾದಾಗ ಸಾಸಿರ ದುಃಖವಿನ ತಾನಗಳು

ನಿನ್ನ ಸ್ಮರಿಸಿದಾಗ ಜಿನುಗುವುದು ಈ ಹೃದಯದಲ್ಲಿ ಓಯಾಸಿಸ್
ಎಂಥಗಳಿಗೆ ಅವು ಆಹ್ : ಮನದಲ್ಲಿ ಸುಳಿದವು ನಲಿವಿನ ತಾನಗಳು

ಹೂಗಳ ಬಣ್ಣ, ಚಂದಿರನ ಬೆಳ್ಳಿಯಿಂದ ನೆಯ್ದಿದ್ದೆನು ಕನಸೊಂದ
ಇರುಳು ಕೇಳ ಕೆದರಿತು ಶೂನ್ಯದಾ ಮನೆಯಲ್ಲಿ ಗೋಳಿನಾ ತಾನಗಳು

ಸಂಭಾಳಿಸಿಕೊ ಎಂದರೂ ಆಗದಂಥಾ ಉಕ್ಕುವ ಕಂಬನಿಗಳು
ಗಲ್ಲದ ಗುಂಟ ಜಾರುವಾಗ ಹೊರಡುವವು ಕೊರಗಿನ ತಾನಗಳು

ತಿಳಿಯದೆ ಮಾಡುವೆವು ಮರುಳುತನದ ಸ್ವಯಂಕೃತ ಅಪರಾಧಗಳ
ದುಗುಡದ ಇರುಳಿನಲಿ ಚುಕ್ಕೆಗಳ ಸ್ವರದಿಂದ ಸೋಲಿನ ತಾನಗಳು

ನಮ್ಮವರೆನ್ನುವವರೇ ಇವರು ವಿಶ್ವಾಸಗಣ್ಣಿನಾ ವಂಚಕರು
ಅಂತೆ ಬಯಸುವೆ ಮನದಲ್ಲಿ ಮಿಡಿಯಲಿ ನೋವ ಮರೆಯುವ ತಾನಗಳು



## ಗೆಳತಿ...

ಗೆಳತಿ
ಹಗಲೆಲ್ಲಾ
ಬಿಸಿಲು ಕೊಡುವ ಸೂರ್ಯನಾದರೂ
ರಾತ್ರಿ ಮಾತ್ರ
ತಂಪಾದ ತಂಗಾಳಿಯೊಂದಿಗೆ
ಬೆಳಕು ಚೆಲ್ಲುವ ಚಂದ್ರಮ

೦ ಸಂಗಮೇಶ ಗುಡಿ , ಹಳಿಸಗರ

# ನಾನು ಮೊದಲ ಬಲಿ



ಂ ತಾರಿಣಿ ಚಿದಾನಂದ

೧೯೭೪ ರ ಸಮಯ ಕನ್ನಡಪರ ಕೆಲಸಮಾಡುತ್ತಿದದ ವಾಟಾಳ್ ನಾಗರಾಜ್ ಮತ್ತು ಅವರ ಗುಂಪು ಕನ್ನಡ ಲೇಖಕರಿಗೂ, ಸಾಹಿತಿಗಳಿಗೂ ಸನ್ಮಾನ ಮಾಡುವ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಸನ್ಮಾನಕ್ಕಾಗಿ ಹೊರಗೆ ಬರಲಗದ, ಹೊರಗೆ ಬರಲು ಇಷ್ಟಪಡದ ಸಾಹಿತಿಗಳಿಗೆ ಅವರವರ ಮನೆಗೇ ಹೋಗಿ ಸನ್ಮಾನ ಮಾಡುವ ಕಾರ್ಯಕ್ರಮ ಅದಾಗಿತ್ತು.

ತಂದೆಯವರಿಗೆ ಕಾಗದ ಬರೆದು ಅವರನ್ನು ನೋಡಲು ಒಂದು ದಿನಾಂಕ ಕೊಡಬೇಕೆಂದು ಕೇಳಿಕೊಂಡಿದ್ದರು. ತಂದೆಯವರ ಉತ್ತರ ಸಿಕ್ಕಿದ ಮೇಲೆ ಅವರು ಸಲೂಚಿಸಿದ ದಿನಾಂಕದಂದು ಉದಯರವಿಗೆ ಕೆಲವು ಜನರೊಡನೆ ಬಂದರು. ತಂದೆಯವರಿಗೆ ತಮ್ಮ ಉದ್ದೇಶ ತಿಳಿಸಿ ಮೊದಲ ಸನ್ಮಾನ ತಮಗೇ ಮಾಡಬೇಕೆಂದಿದ್ದೇವೆ. ಹೆಚ್ಚು ಜನ ಬರುವುದಿಲ್ಲ. ಇಪ್ಪತ್ತೈದು ಮೂವ್ವತ್ತು ಜನದೊಳಗೆ ಕರೆದುಕೊಂಡು ಬರುವೆ ಎಂದು ತಂದೆಯವರನ್ನು ಒತ್ತಾಯಿಸಿ ಒಪ್ಪಿಸಿ, ಸನ್ಮಾನ ಮಾಡುವ ದಿನಾಂಕ ಗೊತ್ತುಪಡಿಸಿಕೊಂಡು ಹೋದರು. ಅವರ ಒತ್ತಾಯಕ್ಕೆ ತಂದೆಯವರು ಒಪ್ಪಿಗೆಕೊಟ್ಟು ಕಳುಹಿಸಿದರು. ಜನರು ಹೋದಮೇಲೆ ಅಮ್ಮ ಯಾರು ಅಷ್ಟೊಂದು ಜನ ಬಂದಿದ್ದು ಎಂದು ವಿಚಾರಿಸಿದಾಗ, ಹೊರಗೆ ಬರದ ಲೇಖಕರಿಗೆ, ಸಾಹಿತಿಗಳಿಗೆ ಮನೆಯಲ್ಲೇ ಸನ್ಮಾನ ಮಾಡುವರಂತೆ. ಅದರ ಮೊಲದ ಬಲಿ ನಾನಂತೆ ಎಂದು ಹೇಳಿ ನಕ್ಕರು.

**ಹೊರಗೆ ಬರದ ಲೇಖಕರಿಗೆ, ಸಾಹಿತಿಗಳಿಗೆ ಮನೆಯಲ್ಲೇ ಸನ್ಮಾನ ಮಾಡುವರಂತೆ. ಅದರ ಮೊಲದ ಬಲಿ ನಾನಂತೆ ಎಂದು ಹೇಳಿ ನಕ್ಕರು.**

ತಂದೆಯವರು ಹೇಳಿದ ದಿನಾಂಕ ವಾಟಾಳ್ ನಾಗರಾಜ್ ಮತ್ತು ಅವರ ಗುಂಪು ಸುಮಾರು ೩೦-೩೫ ಜನರೊಡನೆ ಬಂದರು. ದೊಡ್ಡ ಬುಟ್ಟಿ ತುಂಬ ಹೂವಿನಹಾರ ಹಾಗೂ ಹಣ್ಣು ಹಂಪಲು,ಶಾಲು, ಎಲ್ಲದರೊಡನೆ ತಂದೆಯವರು ಹೇಳಿದ ಸಮಯಕ್ಕೆ ಹಾಜರಾದರು. ತಂದೆಯವರು ಮೊದಲೆ ನಾಟ್ಯ ಸರಸ್ವತಿ ತೊಳೆದು ಹಾಲ್ ನ ಮೇಜಿನ ಮೇಲೆ ಇಡಲು ಹೇಳಿದ್ದರು. ಅವರು ಬುಟ್ಟಿಯಿಂದ ದೈತ್ಯಾಕಾರದ ಮಲ್ಲಿಗೆ ಹಾರ ನಾಲ್ಕು ಜನ ಸೇರಿ ತಂದೆಯವರಿಗೆ ಹಾಕಲು ತೆಗೆದಾಗ ನನಗೆ ಬೇಡ. ನಾಟ್ಯಸರಸ್ವತಿಗೆ ಅರ್ಪಿಸಿ ಎಂದರು. ತಂದೆಯವರು ತಾವು ಹಾಕಿಸಿಕೊಳ್ಳಲಿಲ್ಲ. ಹಾರವನ್ನು ಬುಟ್ಟಿ ಸಮೇತ ವಾಟಾಳ್ ಅವರು ಸರಸ್ವತಿಯ ಹತ್ತಿರ ಇಟ್ಟರು. ಅಮ್ಮನೂ ಬರಬೇಕು, ಶಾಲನ್ನು ಇಬ್ಬರಿಗೂ

# ಸಮಸ್ತಲೋಕ, ದೇವತೆಗಳು ಆಶ್ರಯಿಸಿರುವುದ ಬ್ರಾಹ್ಮಣನನ್ನು!

'ಮನುಸ್ಮೃತಿ'ಯೆ ನಮ್ಮ (ಹಿಂದೂ) ಧರ್ಮದ ಬೈಬಲ್ ಅದು ಜಾರಿಗೆ ಬರಲೇಬೇಕೆಂದು ಹುನ್ನಾರ ನಡೆಸಿರುವ ಸಂಘಪರಿವಾರಿಗಳು ಯಾವತ್ತೂ ವಿತಂಡವಾದಿಗಳೆ ಆಗಿದ್ದಾರೆ. ಒಂದು ಕಡೆ ಸಮಾನತೆಯ ಪಾಠ ಬೋಧಿಸುತ್ತ ಅಸಮಾನತೆಯನ್ನು ಬಿತ್ತುವ ಕಳ್ಳ ಕೊರಮರು.

ಮನುಷ್ಯನ ಹುಟ್ಟೆ ಶ್ರೇಷ್ಠ ಎಂದೆ ವಾದಿಸುವ ಈ ಅವಿವೇಕಿಗಳು ಹಿಂದೆ ಎಂಥೆಂಥ ವಿತಂಡವಾದವನ್ನು ಧರ್ಮದ ಹೆಸರಿನಲ್ಲಿ ತುರುಕಿ ಜನತೆಯನ್ನು ದಿಕ್ಕುತಪ್ಪಿಸುತ್ತಿದ್ದರು ಎಂದು ನಿಮಗೆಲ್ಲ ಗೊತ್ತಾದರೆ ಅವರ ಹುನ್ನಾರ ಅರಿಯಲು ಸಾಧ್ಯವಾಗುತ್ತದೆ.

ಮನುಸ್ಮೃತಿಯ ಆಯ್ದ ಕೆಲವು ವಾಕ್ಯಗಳು.

* ಸಮಸ್ತ ಲೋಕ, ದೇವತೆಗಳೆ ಬ್ರಾಹ್ಮಣರನ್ನು ಆಶ್ರಯಿಸಿರುವಾಗ ಹಾಗೂ ಬ್ರಹ್ಮಶಕ್ತಿಯೇ ಬ್ರಾಹ್ಮಣರ ಐಶ್ವರ್ಯವಾಗಿರುವಾಗ, ಅಂತಹ ಬ್ರಾಹ್ಮಣರನ್ನು ಹಿಂಸಿಸಿ ಯಾರು ತಾನೆ ಬದುಕು ಉಳಿಯ ಬಲ್ಲನು (ಅಧ್ಯಾಯ-೯,೩೧೬)

* ಮಥಿಸಲ್ಪಟ್ಟ ಅರಣಿಯಿಂದ ಜನಿಸಿದ ಬೆಂಕಿಯು ಉರಿಯುತ್ತಿದ್ದರೂ, ಮಂದವಾಗಿದ್ದರೂ ಹೇಗೆ ಅದು ಅಗ್ನಿ ದೇವತೆ ಆಗಿರುತ್ತದೋ, ಹಾಗೆಯೇ ಬ್ರಾಹ್ಮಣನು ಕೂಡಾ ವಿದ್ವಾಂಸನಾಗಿದ್ದರೂ ಅವಿದ್ವಾಂಸನಾಗಿದ್ದರೂ ದೇವತೆಗಳಿಗೆ ಸಮಾನ ಆಗಿರುತ್ತಾನೆ.
(ಅಧ್ಯಾಯ-೯,೩೧೭)

* ಬ್ರಾಹ್ಮಣರಾಗಿರುವವ ಅನಿಷ್ಟ ಕರ್ಮಗಳಲ್ಲಿ ತೊಡಗಿದರೂ ಅವರು ಅಪವಿತ್ರರಾಗುವುದಿಲ್ಲ. ಬದಲಾಗಿ ಅವರು ದೇವತಾ ಸ್ವರೂಪರಾಗಿರುವುದರಿಂದ ಸದಾ ಪೂಜ್ಯರೂ, ಪವಿತ್ರರು ಆಗಿರುತ್ತಾರೆ.
( ಅಧ್ಯಾಯ : ೯,೩೧೯ )

* ತಾನು ದಂಡ ವಿಧಿಸಿ ಸಂಗ್ರಹಿಸಿದ ಹಣವನ್ನು ರಾಜನು ಬ್ರಾಹ್ಮಣರಿಗೆ ದಾನಮಾಡಬೇಕು. ನಂತರ ತನ್ನ ರಾಜ್ಯವನ್ನು ಪುತ್ರನಿಗೆ ಒಪ್ಪಿಸಿಕೊಟ್ಟು ತಾನು ರಣದಲ್ಲಿ ವೀರ ಮರಣವನ್ನು ಹೊಂದತಕ್ಕದ್ದು.
(ಅಧ್ಯಾಯ - ೯, ೩೨೧)

* ಬ್ರಾಹ್ಮಣರು ಮಾತ್ರ ವೇದಗಳನ್ನು ಕಲಿಸಬೇಕು. ಉಳಿದ ಜಾತಿಯವರು ಕಲಿಸಬಾರದು. ಇದು ಶಾಸ್ತ್ರ ನಿರ್ಣಯ
(ಅಧ್ಯಾಯ -೧೦,೦೧)

* ವೇದ ಪಾರಂಗತನಾದ ಬ್ರಾಹ್ಮಣನು ಸಕಲ ಲೋಕಕ್ಕೆ ಒಡೆಯನು( ಅಧ್ಯಾಯ : ೮,೨೮೧ )

– ಏಕಲವ್ಯ



# ಸಿನೆಮಾದವರನ್ನು ಮಾತ್ರ ಮದುವೆ ಆಗಲಾರೆ

- ಅಂದ್ರಿತಾ



ಜಂಗ್ಲಿ ಚಿತ್ರದಲ್ಲಿ ನೀವು ಈಗಾಗಲೆ ಗಮನಿಸಿರಬಹುದು. ಸಕತ್ ಹಾಟ್ ಆಗಿ ನಿಮ್ಮ ಎದೆಯಲ್ಲಿ ದಿನನಿತ್ಯ ಕಚಗುಳಿ ಇಡುತ್ತಿರುವ ಅಂದ್ರಿತಾ ರೈ ತುಂಬಾ ಬಿಜಿಯಾಗಿದ್ದಾಳೆ. ರಾಜಸ್ಥಾನದಲ್ಲಿ ಹುಟ್ಟಿ ಕಲ್ಕತ್ತಾದಲ್ಲಿ ಕೆಲವು ದಿನ ಇದ್ದು ನಂತರ ಬೆಂಗಳೂರಿಗೆ ಡೆಂಟಿಸ್ಟ್ ಆಗಬೇಕೆಂದು ಬಂದ ಬೆಡಗಿ ನೆಲೆ ನಿಂತದ್ದು ಗಾಂಧಿನಗರದಲ್ಲಿ.

ತಾರೆಯಾದ ಮೇಲೆ ಅಂದ್ರಿತಾ ಓದಿಗೆ ಗುಡ್ ಬೈ ಹೇಳಿ ಸಂಪೂರ್ಣ ಚಿತ್ರರಂಗದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದಾಳೆ. ಅವಳೊಂದಿಗೆ ಸಂಕ್ಷಿಪ್ತ ಸಂದರ್ಶನವನ್ನು ನಮ್ಮ ಓದುಗರಿಗಾಗಿ ಇಲ್ಲಿ ಕೊಡಮಾಡಲಾಗಿದೆ.

ಪತ್ರಿಕೆ : ಜಂಗ್ಲಿ ಚಿತ್ರದ ಬಗ್ಗೆ ಹಾಗೂ ಅದರಲ್ಲಿ ಹಾಟ್ ದೃಶ್ಯದ ಬಗ್ಗೆ ಹೇಳಿ ?

ಅಂದ್ರಿತಾ : ಕಾಲೇಜಿಗೆ ಹೋಗುವ ಸಹಜವಾದ ಪಾತ್ರ. ದುನಿಯಾದ ಸೂರಿಯವರ ಚಿತ್ರ ಅಂದ್ಮೇಲೆ ಕೇಳಬೇಕಾ ? ಮತ್ತೊಂದು ಸಂಗತಿ, ಯಾವುದೆ ಚಿತ್ರದಲ್ಲಾದರೂ ನಾವು ಯಾವುದೇ ಡ್ರೆಸ್ ತೊಟ್ಟರೂ ಗ್ಲಾಮರ್ ಆಗಿರಬೇಕೆ ಹೊರತು ವಲ್ಗರ್ ಆಗಿ ಅಲ್ಲ , ಅಲ್ಲವೆ ?

ಜಂಗ್ಲಿಯಲ್ಲಿ ಆ ಹಾಡಿಗೆ , ದೃಶ್ಯಕ್ಕೆ ತಕ್ಕ ಡ್ರೆಸ್ ಹಾಕಿಕೊಳ್ಳಬೇಕಾಗಿತ್ತು. ಹಾಕಿಕೊಂಡೆ. ಅದು ಸಕತ್ ಹಾಟ್ ದೃಶ್ಯ ಎಂದು ತಿಳಿದುಕೊಂಡಿದ್ದರೆ ನೀವು ಎಂಜಾಯ್ ಮಾಡಿ.

ಪತ್ರಿಕೆ : ಯಾರಾದರೂ ಬಾಯ್ ಪ್ರೇಂಡ್ಸ್ ಇದ್ದಾರಾ ?
ಅಂದ್ರಿತಾ : ಈಗ ಅಂತಂದ್ದಕ್ಕೆಲ ಟೈಮ್ ಎಲ್ಲಿದೆ ?

ಪತ್ರಿಕೆ : ಮಾಡೆಲಿಂಗ್ ನ್ನು ಈಗ ಜಾಸ್ತಿ ಇಷ್ಟಪಡುತ್ತಿಲ್ಲವೆ ?
ಅಂದ್ರಿತಾ : ನಾನು ಮಾಡೆಲಿಂಗ್ ಮೂಲಕವೇ ಸಿನೆಮಾಗೆ ಎಂಟ್ರಿ ಆದವಳು. ಆದ್ರೆ ಸಮಯದ ಅಭಾವ ಜಾಹೀರಾತಿನಿಂದ ದೂರ ಸರಿದಿದ್ದೇನೆ ಅಷ್ಟೆ.

ಪತ್ರಿಕೆ : ಕನ್ನಡದ ಚಿತ್ರಗಳಲ್ಲಿ ನಟಿಸಿದ್ದರೂ ನಿಮಗೆ ಕನ್ನಡದಲ್ಲಿ ಮಾತಾಡಲು ಬರುವುದಿಲ್ಲವಲ್ಲ ಏಕೆ ?
ಅಂದ್ರಿತಾ : ಈಗೀಗ ನೀವು ಕನ್ನಡದಲ್ಲಿ ಮಾತಾಡಿದ್ದೇಲ್ಲ ಸಂಪೂರ್ಣ ಅರ್ಥವಾಗುತ್ತದೆ. ಆದರೆ ನಾನು ಕನ್ನಡ ಭಾಷೆಯಲ್ಲಿ ಮಾತಾಡಿದರೆ ಅಪಭ್ರಂಶವಾಗಬಾರದೆಂದು ಸುಮ್ಮನಿದ್ದೇನೆ.

ನೋಡುತ್ತೀರಿ.... ಮುಂದೊಂದು ದಿನ ನನ್ನ ಪಾತ್ರಕ್ಕೆ ನಾನೇ ಧ್ವನಿ ನೀಡುತ್ತೇನೆ.

ಪತ್ರಿಕೆ : ನಿನಗೆ ಶ್ಯಾಪಿಂಗ್‌ಗೆ ಕಳಿಸಿದರೆ ?
ಅಂದ್ರಿತಾ : ನಾನು ನಿಜಕ್ಕೂ ಹೇಳಬೇಕೆಂದರೆ ಕೊಳ್ಳುಬಾಕಿ. ನನ್ನ ಪರ್ಸ ಕೂಡ ನೋಡದೆ ಖರೀದಿಯಲ್ಲಿ ನಿಂತುಬಿಡುತ್ತೇನೆ. ಕ್ರೆಡಿಟ್ ಕಾರ್ಡ ಇರುವುದರಿಂದ ಕೊಂಚ ನೆಮ್ಮದಿ.

ಪತ್ರಿಕೆ : ನಿನ್ನ ಗಂಡನಾಗುವವನು ಹೇಗಿರಬೇಕು ? ಈಗಾಗಲೇ ಅಂಥವನನ್ನು ಆಯ್ಕೆ ಮಾಡಿಕೊಂಡಿದ್ದೀರಾ ?
ಅಂದ್ರಿತಾ : ಹಾಂಡಸಮ್ ಆಗಿಯೂ ಕ್ಯೂಟ್ ಆಗಿಯೂ ಇರಬೇಕು. ಆತ ನಾನು ಹೇಳುವುದಕ್ಕೆಲ್ಲ ತಲೆ ಹಾಕದೆ , ಸರಿಯಲ್ಲದ ನನ್ನ ವಿಚಾರಗಳನ್ನು ತಿದ್ದುವವನಾಗಿರಬೇಕು. ನಾನು ಶಾಪಿಂಗ್ ಹೋಗುವಾಗ ನನ್ನ ಜೊತೆ ಅವನೂ ಜ್ವಾಲಿಯಾಗಿ ಬರುವವನಾಗಿರಬೇಕು.

ಸಿನೇಮಾದವರಂತೂ ಖಂಡಿತ ಬೇಡ. ನಾನಿನ್ನೂ ಆಯ್ಕೆ ಮಾಡಿಕೊಂಡಿಲ್ಲ.



**ಜಂಗ್ಲಿಯಲ್ಲಿ ಆ ಹಾಡಿಗೆ , ದೃಶ್ಯಕ್ಕೆ ತಕ್ಕ ಡ್ರೆಸ್ ಹಾಕಿಕೊಳ್ಳಬೇಕಾಗಿತ್ತು. ಹಾಕಿಕೊಂಡೆ. ಅದು ಸಕತ್ ಹಾಟ್ ದೃಶ್ಯ ಎಂದು ತಿಳಿದುಕೊಂಡಿದ್ದರೆ ನೀವು ಎಂಜಾಯ್ ಮಾಡಿ.**

○ ಅಂದ್ರಿತಾ

